| | | | |
|---|---|---|---|
| v) | The Principal Secretary to Government, Revenue Department | - | Member |
| vi) | The Principal Secretary to Government, | - | Member |
| | Public Works Department | - | Member |
| vii) | The Principal Secretary to Government, Home Department | - | Member |
| viii) | The Secretary to Government, Transport Department | - | Member |
| ix) | The Secretary to Government, (Environment) Forest, Ecology and Environment Department | - | Member |
| x) | Member Secretary, Karnataka State Pollution Control Board | - | Member |
| xi) | Regional Controller of Mines, Indian Bureau of Mines, Bangalore | - | Member |
| xii) | Director General, Geological Survey of India, Southern Range, Bangalore | - | Member |
| xiii) | Director, Department of Mines and Geology, Bangalore | - | Member Secretary/Convener |

The Committee may also invite representatives from the associations relating to mining and mineral-related trade bodies such as FIMI, FKCCI, Quarry Owners' Association, etc., and representative of Ministry of Steel, Government of India, whenever related issues are brought up for consideration.

**The Functions of the Co-ordination-cum-Empowered Committee**

i) Review of implementation of Karnataka Mineral Policy 2008;

ii) Streamlining and simplification of grant of mineral concessions;

iii) Building-up of a computerized data base effectively integrated with other State level data base;

iv) Effective Co-ordination with Revenue, Forest, Environment and other Departments for necessary clearances, NOC/approvals in a streamlined way;

v) Monitor grant of approvals for mineral concessions and compliance with provisions of different Enactments/Act/Rules;

vi) To review the action taken by the various Departments to checking illegal mining activities.

**Periodicity of the meeting :**

The committee will meet once in a quarter.

By Order and in the name of the Governor of Karnataka,

**M. VASUDEVA MURTHY**

Under Secretary to Government, (Mines),

Commerce & Industries Department.

PR. 55

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ರಾಷ್ಟ್ರೀಯ ಅಂಗವಿಕಲರ ಹಣಕಾಸು ಮತ್ತು ಅಭಿವೃದ್ಧಿ ನಿಗಮದ ಯೋಜನೆಗಳ ಅನುಷ್ಠಾನ ಕುರಿತಂತೆ ಜಿಲ್ಲಾ ಸಮಿತಿ, ಯೋಜನಾ ಅನುಮೋದನಾ ಸಮಿತಿ ಮತ್ತು ರಾಜ್ಯ ಮಟ್ಟದ ಸಮಿತಿ ರಚನೆ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ. ಮಮಇ 356 ಪಿಹೆಚ್‌ಪಿ 2006, ದಿನಾಂಕ 25–06–2008

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ, ಬೆಂಗಳೂರು, ಇವರ ಪತ್ರ ಸಂಖ್ಯೆ ಮಅನಿ; NHFDC 009, 2008–09/579, ದಿನಾಂಕ 09–11–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರ ಸರ್ಕಾರಿ ಆದೇಶದಲ್ಲಿ ರಾಷ್ಟ್ರೀಯ ಅಂಗವಿಕಲರ ಹಣಕಾಸು ಅಭಿವೃದ್ಧಿ ನಿಗಮದ ವತಿಯಿಂದ ರಾಜ್ಯದಲ್ಲಿ ಅಂಗವಿಕಲರಿಗಾಗಿ ಸಾಲ ಸೌಲಭ್ಯ ದೊರಕಿಸಿಕೊಡಲು ಚಾನಲೈಸಿಂಗ್ ಏಜೆನ್ಸಿಯಾಗಿ ಕರ್ತವ್ಯ ನಿರ್ವಹಿಸುತ್ತಿರುವ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಬದಲಾಗಿ ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವನ್ನು 2008–09ನೇ ಆರ್ಥಿಕ ಸಾಲಿನಿಂದ ಚಾನಲೈಸಿಂಗ್ ಏಜೆನ್ಸಿಯಾಗಿ ಕರ್ತವ್ಯ ನಿರ್ವಹಿಸಲು ಆದೇಶಿಸಿದೆ.

2008–09ನೇ ಸಾಲಿನಿಂದ ರಾಷ್ಟ್ರೀಯ ಅಂಗವಿಕಲರ ಹಣಕಾಸು ಅಭಿವೃದ್ಧಿ ಸಂಸ್ಥೆಯಿಂದ ಸಾಲ ಪಡೆದು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮವು ರಾಜ್ಯದಲ್ಲಿ ಅಂಗವಿಕಲರಿಗಾಗಿ ಸಾಲ ಸೌಲಭ್ಯ ದೊರಕಿಸಿಕೊಡಲು ಯೋಜನೆಗಳನ್ನು ಅನುಷ್ಠಾನಗೊಳಿಸಲು ಚಾನಲೈಸಿಂಗ್ ಏಜೆನ್ಸಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಮೇಲೆ ಓದಲಾದ ಕ್ರಮಾಂಕ (2)ರ ವ್ಯವಸ್ಥಾಪಕ ನಿರ್ದೇಶಕರವರ ಪತ್ರ ದಿನಾಂಕ 09–11–2009 ರಲ್ಲಿ ಸರ್ಕಾರದಿಂದ ಈ ಯೋಜನೆಗೆ ರೂ.2.00 ಕೋಟಿಗಳಿಗೆ ಗ್ಯಾರಂಟಿ ನೀಡಲಾಗಿದ್ದು, ಫಲಾನುಭವಿಗಳ ಆಯ್ಕೆಯ ಸಂಬಂಧ ತಾಲ್ಲೂಕು ಸಮಿತಿ, ಜಿಲ್ಲಾ ಸಮಿತಿ ಮತ್ತು ರಾಜ್ಯ ಮಟ್ಟದ ಸಮಿತಿಗಳನ್ನು ರಚಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 81 ಮಅನಿ 2008, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2009.**

ರಾಷ್ಟ್ರೀಯ ಅಂಗವಿಕಲರ ಹಣಕಾಸು ಮತ್ತು ಅಭಿವೃದ್ಧಿ ನಿಗಮದ ಯೋಜನೆಗಳ ಅನುಷ್ಠಾನದ ಸಂಬಂಧ ಈ ಕೆಳಕಂಡ ಸದಸ್ಯರನ್ನೊಳಗೊಂಡ ಜಿಲ್ಲಾ ಸಮಿತಿ, ಯೋಜನಾ ಅನುಮೋದನಾ ಸಮಿತಿ ಮತ್ತು ರಾಜ್ಯ ಮಟ್ಟದ ಸಮಿತಿಗಳನ್ನು ರಚಿಸಲಾಗಿದೆ.

**I. ಜಿಲ್ಲಾ ಸಮಿತಿಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡಿರುತ್ತಾರೆ :**

| | | | |
|---|---|---|---|
| 1) | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ | – | ಅಧ್ಯಕ್ಷರು |
| 2) | ಜಿಲ್ಲಾ ವ್ಯವಸ್ಥಾಪಕರು ಹಾಗೂ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | – | ಸದಸ್ಯ ಕಾರ್ಯದರ್ಶಿ |
| 3) | ಪ್ರಧಾನ ವ್ಯವಸ್ಥಾಪಕರು, ಜಿಲ್ಲಾ ಕೈಗಾರಿಕಾ ಕೇಂದ್ರ | – | ಸದಸ್ಯರು |
| 4) | ಉಪ ನಿರ್ದೇಶಕರು, ಪಶುಸಂಗೋಪನೆ ಇಲಾಖೆ | – | ಸದಸ್ಯರು |
| 5) | ಸಹ/ಉಪ ನಿರ್ದೇಶಕರು, ಕೃಷಿ ಇಲಾಖೆ | – | ಸದಸ್ಯರು |
| 6) | ಉಪ ನಿರ್ದೇಶಕರು, ರೇಷ್ಮೆ ಇಲಾಖೆ | – | ಸದಸ್ಯರು |
| 7) | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು | – | ಸದಸ್ಯರು |
| 8) | ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿ | – | ಸದಸ್ಯರು |
| 9) | ಜಿಲ್ಲಾ ಆರೋಗ್ಯ ಅಧಿಕಾರಿಗಳು | – | ಸದಸ್ಯರು |
| 10) | ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು | – | ಸದಸ್ಯರು |

**ಕರ್ತವ್ಯಗಳು :**

ಈ ಜಿಲ್ಲಾ ಸಮಿತಿಯ ಸದಸ್ಯ ಕಾರ್ಯದರ್ಶಿಯು ಬಂದ ಎಲ್ಲಾ ಅರ್ಜಿಗಳ ಪರಿಶೀಲನೆ ಮಾಡಿ ಸಮಿತಿಯ ಮುಂದೆ ಮಂಡಿಸುವುದು ತಾಲ್ಲೂಕು ಸಮಿತಿಯು ಎಲ್ಲಾ ಅರ್ಜಿಗಳನ್ನು ಪರಿಶೀಲಿಸಿ, ಅವಶ್ಯವಿದ್ದಲ್ಲಿ ಅಭ್ಯರ್ಥಿಗಳ ಸಂದರ್ಶನ ನಡೆಸಿ, ಫಲಾನುಭವಿಯು ಕೈಗೊಳ್ಳಬಹುದಾದ ಯೋಜನೆಯ ಬಗ್ಗೆ ಪರಿಶೀಲಿಸಿ ಅರ್ಹ ಎಲ್ಲಾ ಫಲಾನುಭವಿಗಳ ಹೆಸರನ್ನು ಹಾಗೂ ಮಂಜೂರು ಮಾಡಬಹುದಾದ ಸಾಲದ ಹಣವನ್ನು ವಿವರಗಳೊಂದಿಗೆ ನಿಗಮದ ಯೋಜನಾ ಅನುಮೋದನಾ ಸಮಿತಿಗೆ ಶಿಫಾರಸ್ಸು ಮಾಡುವುದು.

II. **ನಿಗಮದ ಯೋಜನಾ ಅನುಮೋದನಾ ಸಮಿತಿಯು ಈ ಕೆಳಕಂಡ ಸದಸ್ಯರನ್ನೊಳಗೊಂಡಿರುತ್ತದೆ :**

| | | | |
|---|---|---|---|
| 1) | ವ್ಯವಸ್ಥಾಪಕ ನಿರ್ದೇಶಕರು, ಕ.ರಾ.ಮ.ಅ.ನಿಗಮ | – | ಅಧ್ಯಕ್ಷರು |
| 2) | ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ | – | ಸದಸ್ಯರು |
| 3) | ಪ್ರಧಾನ ವ್ಯವಸ್ಥಾಪಕರು, ಕ.ರಾ.ಮ.ಅ.ನಿಗಮ | – | ಸದಸ್ಯರು |
| 4) | ಸ್ವಯಂ ಸೇವಾ ಸಂಸ್ಥೆಯ ಒಬ್ಬರು ಪ್ರತಿನಿಧಿ | – | ಸದಸ್ಯರು |

**ಕರ್ತವ್ಯಗಳು :**

ನಿಗಮದ ಯೋಜನಾ ಸಮಿತಿಯು ಜಿಲ್ಲಾ ಸಮಿತಿಯಿಂದ ಬಂದಿರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ ನಿಗದಿಪಡಿಸಿರುವ ಭೌತಿಕ ಮತ್ತು ಆರ್ಥಿಕ ಗುರಿಯಂತೆ ಫಲಾನುಭವಿಗಳನ್ನು ಆಯ್ಕೆ ಮಾಡುವುದು. ಆಯ್ಕೆ ಮಾಡಿದ ಫಲಾನುಭವಿಗಳ ವಿವರಗಳನ್ನು ಹಣ ಬಿಡುಗಡೆಗಾಗಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರಿಗೆ ಶಿಫಾರಸ್ಸು ಮಾಡುವುದು.

III. **ರಾಜ್ಯ ಮಟ್ಟದ ಸಮಿತಿಯು ಈ ಕೆಳಕಂಡ ಸದಸ್ಯರನ್ನೊಳಗೊಂಡಿರುತ್ತದೆ :**

| | | | |
|---|---|---|---|
| 1) | ಸರ್ಕಾರದ ಕಾರ್ಯದರ್ಶಿಯವರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | – | ಅಧ್ಯಕ್ಷರು |
| 2) | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ | – | ಸದಸ್ಯ–ಕಾರ್ಯದರ್ಶಿ |
| 3) | ನಿರ್ದೇಶಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ | – | ಸದಸ್ಯರು |
| 4) | ಉಪ ಪ್ರಧಾನ ವ್ಯವಸ್ಥಾಪಕರು, ನಬಾರ್ಡ್ | – | ಸದಸ್ಯರು |

**ಕರ್ತವ್ಯಗಳು :**

ರಾಜ್ಯ ಮಟ್ಟದ ಸಮಿತಿಯು ಆಗಿಂದಾಗ್ಗೆ ಸಭೆ ಸೇರಿ ಯೋಜನೆಯ ಪ್ರಗತಿಯನ್ನು ಪರಿಶೀಲಿಸುವುದು, ಹಾಗೂ ರಾಷ್ಟ್ರೀಯ ನಿಗಮದಿಂದ ಸಾಲ ಪಡೆಯಲು ಕ್ರಮ ಕೈಗೊಳ್ಳುವುದು ಮತ್ತು ಯೋಜನೆಯನ್ನು ಯಶಸ್ವಿಗೊಳಿಸಲು ಮಾರ್ಗಸೂಚಿಗಳನ್ನು ರಚಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಪಿ.ಆರ್.56

ಸರ್ಕಾರದ ಅಧೀನ ಕಾರ್ಯದರ್ಶಿ–2,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ENERGY SECRETARIAT

**Sub :** Supplementary Power Purchase Agreement for M/s. Udupi Power Corporation Limited (UPCL), Nandkur village, Udupi District.

**Read :** (1) Letter No. UPCL/B01/2008/1153 dated 29-07-2008 of M/s UPCL
(2) Letter No. EN 15 PPC 2005 dated 3-2-2009.
(3) Letter No. F No. J – 13011/23-1-1996 – IA.II (T) dated 09-09-2009 of Ministry of Environment and Forest, Government of India.
(4) DO Letter No. PCKL/A1/12/05-06, dated 18-11-2009 of MD, KPTCL.

**Preamble:**

1. The Power Purchase Agreement (PPA) for the 1015 MW Coal Based Power Project of M/s. Udupi Power Corporation Limited (UPCL) was signed by the Electricity Supply Companies (ESCOMs) with M/s. UPCL on 26-12-2005. The Central Electricity Regulatory Commission (CERC) has agreed in principle Capital Cost of Rs.4299 Crores.

2. M/s UPCL vide letter read at (1) above addressed to the Chief Secretary, Government of Karnataka requested for enhancement of project capacity to 1500 MW. The Government vide letter read (2) above has accorded in principle no objection to increase the capacity for UPCL from 1015 MW to 1500 MW. The Ministry of Environment and Forests vide letter read at (3) above has given approval for 1200 MW. The plant is under construction and the first unit of 600 MW is expected to be commissioned in April-May 2010. All efforts are being made to have this capacity increase started before the end of this financial year.

3. The Managing Director, Karnataka Power Transmission Corporation Limited vide letter read at (4) above has informed that M/s.UPCL vide letter dated 26-09-2009 have sought for certain amendments to the Power Purchase Agreement (PPA) which has entered into on 26-12-2005. The revised capital cost as indicated by M/s. UPCL is now Rs.5764.394 Crores and the proposed revised tariff would be Rs.2.54 per Unit.

4. The request of the UPCL has been processed by the Committee constituted by Power Company of Karnataka Limited (PCKL) and MD, KPTCL vide letter read at (4) above, has requested the approval of the Government for the following :

1. Amendments sought by M/s. UPCL and which are recommended for approval.
2. Amendments proposed by M/s UPCL and not considered by the Committee.
3. New Clause recommended by the Committee for approval and inclusion in the PPA, but these clauses have not been agreed to by M/s. UPCL.
4. Ministry of Environment & Forests letter dated 9th September 2009.

5. When the PPA was signed in 2005, a Committee consisting of Finance, Energy and Law Secretaries had prepared a report and this was placed for the Cabinet.

6. In view of the importance of this matter and the need to ensure that the Supplementary Agreement is drawn up in an objective and transparent manner, it is proposed to constitute a Committee with the following officers.

| | | | |
|---|---|---|---|
| 1. | Additional Chief Secretary, Finance Department | - | Chairman |
| 2. | Additional Chief Secretary, Energy Department | - | Member |
| 3. | Managing Director, Karnataka Power Corporation Limited or his nominee | - | Member |
| 4. | Secretary, Law or his nominee | - | Member |

7. The Committee will process the Supplementary Power Purchase Agreement including request of UPCL and furnish its report to Government to place it before the Cabinet.

8. The matter has been examined and the following orders are issued :

**GOVERNMENT ORDER NO. EN 15 PPC 2005, BANGALORE, DATED 1ST JANUARY 2010**

Under the circumstances explained in the preamble and the need to ensure that the Supplementary Power Purchase Agreement for Udupi Power Project is drawn up in an objective and transparent manner, Government accords approval to constitute a Committee with the following officers :

| | | | |
|---|---|---|---|
| 1. | Additional Chief Secretary, Finance Department | - | Chairman |
| 2. | Additional Chief Secretary, Energy Department | - | Member |
| 3. | Managing Director, Karnataka Power Corporation Limited or his nominee | - | Member |
| 4. | Secretary, Law or his nominee. | - | Member |

The Committee shall process the Supplementary Power Purchase Agreement including the request of M/s. Udupi Power Corporation Limited and furnish its report to Government immediately.

By Order and in the name of the Governor of Karnataka,

**S.J. SAMPATH KUMAR**

Under Secretary to Government,

Energy Department

PR. 57

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡೀಮ್ಡ್ ವಿಶ್ವವಿದ್ಯಾನಿಲಯದ ಸ್ಥಾನಮಾನ ಪಡೆದಿರುವ ನಿಟ್ಟೆ ವಿಶ್ವವಿದ್ಯಾನಿಲಯದ ಸಂಸ್ಥೆಗಳಾದ ಕೆ.ಎಸ್.ಹೆಗಡೆ ಮೆಡಿಕಲ್ ಅಕಾಡೆಮಿ, ನಿಟ್ಟೆ ಉಷಾ ಇನ್‌ಸ್ಟಿಟ್ಯೂಟ್ ಆಫ್ ನರ್ಸಿಂಗ್ ಸೈನ್ಸಸ್, ನಿಟ್ಟೆ ಗುಲಾಬಿಶೆಟ್ಟಿ ಮೆಮೊರಿಯಲ್ ಇನ್‌ಸ್ಟಿಟ್ಯೂಟ್ ಆಫ್ ಫಾರ್ಮಸ್ಯೂಟಿಕಲ್ ಸೈನ್ಸಸ್ ಮತ್ತು ನಿಟ್ಟೆ ಇನ್‌ಸ್ಟಿಟ್ಯೂಟ್ ಆಫ್ ಫಿಸಿಯೊಥೆರಪಿ, ಮಂಗಳೂರು ಇವುಗಳ ಸಂಯೋಜನೆಯನ್ನು ಹಿಂದಕ್ಕೆ ಪಡೆಯುವ ಬಗ್ಗೆ.

**ಓದಲಾಗಿದೆ :** 1. ಸಂಖ್ಯೆ. NU/REG/124/2009-10, ದಿನಾಂಕ 30–10–2009

2. ಸರ್ಕಾರದ ಪತ್ರ ಸಂಖ್ಯೆ : ಆಕುಕ 271 ಎಂಪಿಎಸ್ 2009, ದಿನಾಂಕ 05–12–2009.

3. ರಾಗಾಂಆವಿವಿದ ಪತ್ರ ಸಂಖ್ಯೆ : ಆರ್‌ಪಿ/41/2009–10, ದಿನಾಂಕ 10–12–2009.

4. ರಾಗಾಂಆವಿವಿದ ಪತ್ರ ಸಂಖ್ಯೆ : ಆರ್‌ಪಿ/41/2009–10, ದಿನಾಂಕ 29–10–2009.

**ಪ್ರಸ್ತಾವನೆ :**

ಕುಲಸಚಿವರು, ನಿಟ್ಟೆ ವಿಶ್ವವಿದ್ಯಾನಿಲಯ, ಮಂಗಳೂರು ಇವರು ಮೇಲೆ (1) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಕೆ.ಎಸ್.ಹೆಗಡೆ ಮೆಡಿಕಲ್ ಅಕಾಡೆಮಿ, ಮಂಗಳೂರು, ನಿಟ್ಟೆ ಉಷಾ ಇನ್‌ಸ್ಟಿಟ್ಯೂಟ್ ಆಫ್ ನರ್ಸಿಂಗ್ ಸೈನ್ಸಸ್, ಮಂಗಳೂರು, ನಿಟ್ಟೆ ಗುಲಾಬಿಶೆಟ್ಟಿ ಮೆಮೊರಿಯಲ್ ಇನ್‌ಸ್ಟಿಟ್ಯೂಟ್ ಆಫ್ ಫಾರ್ಮಸ್ಯೂಟಿಕಲ್ ಸೈನ್ಸಸ್, ಮಂಗಳೂರು ಮತ್ತು ನಿಟ್ಟೆ ಇನ್‌ಸ್ಟಿಟ್ಯೂಟ್ ಆಫ್ ಫಿಸಿಯೊಥೆರಪಿ, ಮಂಗಳೂರು ಸಂಸ್ಥೆಗಳನ್ನು ಸರ್ಕಾರದ ಅನುಮೋದನೆಯ ಷರತ್ತಿಗೊಳಪಟ್ಟು ಸಂಯೋಜನೆಯನ್ನು ಹಿಂದಕ್ಕೆ ಪಡೆದಿರುವ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯದ ಕ್ರಮಕ್ಕೆ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ನಿಟ್ಟೆ ವಿಶ್ವವಿದ್ಯಾನಿಲಯದ ಮೇಲೆ (1) ರಲ್ಲಿ ಓದಲಾದ ಪತ್ರವನ್ನು ಕಳುಹಿಸುವುದರೊಂದಿಗೆ ಕಾಯ್ದೆಯನುಸಾರ ಪರಿಶೀಲಿಸಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯವನ್ನು ಕೋರಲಾಗಿತ್ತು.

ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯವು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಕೆ.ಎಸ್.ಹೆಗಡೆ ಮೆಡಿಕಲ್ ಅಕಾಡೆಮಿ, ನಿಟ್ಟೆ ಉಷಾ ಇನ್‌ಸ್ಟಿಟ್ಯೂಟ್ ಆಫ್ ನರ್ಸಿಂಗ್ ಸೈನ್ಸಸ್, ನಿಟ್ಟೆ ಗುಲಾಬಿಶೆಟ್ಟಿ ಮೆಮೊರಿಯಲ್ ಇನ್‌ಸ್ಟಿಟ್ಯೂಟ್ ಆಫ್ ಫಾರ್ಮಸ್ಯೂಟಿಕಲ್ ಸೈನ್ಸಸ್, ಮಂಗಳೂರು ಮತ್ತು ನಿಟ್ಟೆ ಇನ್‌ಸ್ಟಿಟ್ಯೂಟ್ ಆಫ್ ಫಿಸಿಯೊಥೆರಪಿ, ಮಂಗಳೂರು ಈ ಸಂಸ್ಥೆಗಳನ್ನು ಒಳಗೊಂಡ ನಿಟ್ಟೆ ವಿಶ್ವವಿದ್ಯಾನಿಲಯಕ್ಕೆ ಕೇಂದ್ರ ಮಾನವ ಸಂಪನ್ಮೂಲ ಇಲಾಖೆಯು ಡೀಮ್ಡ್ ವಿಶ್ವವಿದ್ಯಾನಿಲಯ ಸ್ಥಾನಮಾನವನ್ನು ಕಲ್ಪಿಸಿರುವುದರಿಂದ ಸಿಂಡಿಕೇಟ್ ನಿರ್ಣಯದಂತೆ ಸದರಿ ನಾಲ್ಕು ಶಿಕ್ಷಣ ಸಂಸ್ಥೆಗಳಿಗೆ ತಾನು ನೀಡಿದ್ದ ಸಂಯೋಜನೆಯನ್ನು ಸರ್ಕಾರದ ಅನುಮೋದನೆಗೆ ಒಳಪಟ್ಟು ಮೇಲೆ (4) ರಲ್ಲಿ ಓದಲಾದ ತನ್ನ ಆದೇಶದಲ್ಲಿ ಹಿಂಪಡೆಯಲಾಗಿದೆಯೆಂದು ಪ್ರಯುಕ್ತ ಆ ಆದೇಶಕ್ಕೆ ಸರ್ಕಾರದ ಅನುಮೋದನೆಗಾಗಿ ಎಂದು ವರದಿ ಮಾಡಿದೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಕೆ.ಎಸ್.ಹೆಗಡೆ ಮೆಡಿಕಲ್ ಅಕಾಡೆಮಿ, ನಿಟ್ಟೆ ಉಷಾ ಇನ್‌ಸ್ಟಿಟ್ಯೂಟ್ ಆಫ್ ನರ್ಸಿಂಗ್ ಸೈನ್ಸಸ್, ನಿಟ್ಟೆ ಗುಲಾಬಿಶೆಟ್ಟಿ ಮೆಮೊರಿಯಲ್ ಇನ್‌ಸ್ಟಿಟ್ಯೂಟ್ ಆಫ್ ಫಾರ್ಮಸ್ಯೂಟಿಕಲ್ ಸೈನ್ಸಸ್ ಮತ್ತು ನಿಟ್ಟೆ ಇನ್‌ಸ್ಟಿಟ್ಯೂಟ್ ಆಫ್ ಫಿಸಿಯೊಥೆರಪಿ, ಮಂಗಳೂರು ಈ ಸಂಸ್ಥೆಗಳ ಸಂಯೋಜನೆಯನ್ನು ಹಿಂದಕ್ಕೆ ಪಡೆದಿರುವ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯದ ಆದೇಶಕ್ಕೆ ಶೇಕಡ 25ರಷ್ಟು ಸೀಟುಗಳನ್ನು ಸರ್ಕಾರಕ್ಕೆ ಬಿಟ್ಟುಕೊಡುವ ಷರತ್ತಿಗೊಳಪಟ್ಟು ಘಟನೋತ್ತರ ಅನುಮತಿ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 271 ಎಂಪಿಎಸ್ 2009, ಬೆಂಗಳೂರು, ದಿನಾಂಕ: 31ನೇ ಡಿಸೆಂಬರ್ 2009**.

ಕೆ.ಎಸ್.ಹೆಗಡೆ ಮೆಡಿಕಲ್ ಅಕಾಡೆಮಿ, ಮಂಗಳೂರು, ನಿಟ್ಟೆ ಉಷಾ ಇನ್‌ಸ್ಟಿಟ್ಯೂಟ್ ಆಫ್ ನರ್ಸಿಂಗ್ ಸೈನ್ಸಸ್, ಮಂಗಳೂರು, ನಿಟ್ಟೆ ಗುಲಾಬಿಶೆಟ್ಟಿ ಮೆಮೊರಿಯಲ್ ಇನ್‌ಸ್ಟಿಟ್ಯೂಟ್ ಆಫ್ ಫಾರ್ಮಸ್ಯೂಟಿಕಲ್ ಸೈನ್ಸಸ್, ಮಂಗಳೂರು ಮತ್ತು ನಿಟ್ಟೆ ಇನ್‌ಸ್ಟಿಟ್ಯೂಟ್ ಆಫ್ ಫಿಸಿಯೊಥೆರಪಿ, ಮಂಗಳೂರು ಈ ಸಂಸ್ಥೆಗಳ ಸಂಯೋಜನೆಯನ್ನು ಹಿಂದಕ್ಕೆ ಪಡೆದಿರುವ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾನಿಲಯದ ಕ್ರಮಕ್ಕೆ ಸರ್ಕಾರದ ಘಟನೋತ್ತರ ಅನುಮತಿಯನ್ನು ನೀಡಲಾಗಿದೆ.

ಈ ಅನುಮತಿಯು ನಿಟ್ಟೆ ವಿಶ್ವವಿದ್ಯಾನಿಲಯವು ತನ್ನ ಸಂಸ್ಥೆಗಳಲ್ಲಿನ ಶೇಕಡ 25ರಷ್ಟು ಸೀಟುಗಳನ್ನು ಪಿಜಿಇಟಿ/ಸಿಇಟಿ ಮೂಲಕ ಹಂಚಲು ಸರ್ಕಾರಕ್ಕೆ ಬಿಟ್ಟುಕೊಡುವ ಒಡಂಬಡಿಕೆ ಹಾಗೂ ಷರತ್ತು ಮುಂದುವರಿಕೆಗೆ ಒಳಪಟ್ಟಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್.58

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**ಕಂದಾಯ ಸಚಿವಾಲಯ**

**ವಿಷಯ :** ಕೆ.ಜಿಎಫ್. ರಾಬರ್ಟ್‌ಸನ್ ಪೇಟೆ ಶ್ರೀ ಚೆಲುವ ವಿನಾಯಕಸ್ವಾಮಿ ದೇವಾಲಯವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸುವ ಬಗ್ಗೆ – ಆದೇಶ.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ ಎಡಿಎಂ–3, ಏಕರೂಪ ಶಾಸನ ಸಿಆರ್.3–/2005–06, ದಿನಾಂಕ 26–02–2008.

**ಪ್ರಸ್ತಾವನೆ :**

ಮೇಲೆ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ 26–02–2008 ರಲ್ಲಿ ಕೋಲಾರ ಜಿಲ್ಲೆ, ಕೆ.ಜಿ.ಎಫ್. ರಾಬರ್ಟ್‌ಸನ್ ಪೇಟೆ ಶ್ರೀ ಚೆಲುವ ವಿನಾಯಕಸ್ವಾಮಿ ದೇವಸ್ಥಾನವು 'ಸಿ' ಪ್ರವರ್ಗಕ್ಕೆ ಸೇರಿದ ಮುಜರಾಯಿ ಸಂಸ್ಥೆಯಾಗಿದ್ದು, ಅಧಿಸೂಚಿತ ಪಟ್ಟಿಯಲ್ಲಿ ಇತರೆ ಮೂರು ಸಂಸ್ಥೆಗಳೊಂದಿಗೆ ಈ ದೇವಾಲಯದ ಹೆಸರು ಕೈಬಿಟ್ಟು ಹೋಗಿರುತ್ತದೆ. ಈ ದೇವಾಲಯದ ಆಡಳಿತವನ್ನು ಸರ್ಕಾರದ ವತಿಯಿಂದ ನೇಮಿಸಿರುವ ಸಮಿತಿ ಹಾಗೂ ಆಡಳಿತಾಧಿಕಾರಿಗಳಿಂದ ನಿರ್ವಹಿಸಲಾಗುತ್ತಿದೆ. ದೇವಾಲಯಕ್ಕೆ ಸರ್ಕಾರದಿಂದ ಅಳವಡಿಸಿರುವ ಹುಂಡಿ ಹಾಗೂ ದೇವಾಲಯಕ್ಕೆ ಸೇರಿದ ಮನೆಗಳಿಂದ ಬರುವ ಬಾಡಿಗೆ ಮೂಲ ಆದಾಯವಾಗಿರುತ್ತದೆ.

ಸದರಿ ದೇವಾಲಯವನ್ನು ಖಾಸಗಿ ಮಾಡಿಕೊಳ್ಳಲು ಶ್ರೀ ಎಸ್. ರಮೇಶ್ ಎಂಬುವವರು ದುರುದ್ದೇಶ ಹೊಂದಿರುತ್ತಾರೆ. ಅಲ್ಲದೆ ಈ ಸಂಸ್ಥೆಗೆ ಸೇರಿದ ಮನೆಯನ್ನು ತನ್ನ ಹೆಸರಿಗೆ ಖಾತೆ ಮಾಡಿಸಿಕೊಂಡಿದ್ದು, ಇದನ್ನು ರದ್ದುಪಡಿಸಲು ಕೆ.ಜಿ.ಎಫ್. ನಗರ ಸಭೆಗೆ ಪತ್ರಗಳನ್ನು ಬರೆಯಲಾಗಿದೆ ಹಾಗೂ ಕಛೇರಿ ಗಮನಕ್ಕೆ ಬರದಂತೆ ಒಂದು ಸಮಿತಿ ರಚಿಸಿಕೊಂಡು, ಈ ರೀತಿ ಕಾನೂನು ವಿರುದ್ಧ ಚಟುವಟಿಕೆಗಳು ನಡೆಸುತ್ತಿರುತ್ತಾರೆಂದು ಜಿಲ್ಲಾಧಿಕಾರಿಗಳು ತಿಳಿಸಿದ್ದಾರೆ.

ಜಿಲ್ಲಾಧಿಕಾರಿಗಳ ವರದಿಯಂತೆ ರಾಬರ್ಟ್‌ಸನ್ ಪೇಟೆ ಶ್ರೀ ಚೆಲುವ ವಿನಾಯಕಸ್ವಾಮಿ ದೇವಾಲಯನ್ನು ಕರ್ನಾಟಕ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಲಂ 23ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರ್ಪಡಿಸಿ ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಕೋರಿಕೆ ಸಲ್ಲಿಸಿರುತ್ತಾರೆ.

ಧಾರ್ಮಿಕ ದತ್ತಿ ಆಯುಕ್ತರವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 29 ಮುಆಬಿ 2008, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2009.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕೋಲಾರ ಜಿಲ್ಲೆ, ಕೆ.ಜಿ.ಎಫ್. ರಾಬರ್ಟ್‌ಸನ್ ಪೇಟೆ ಶ್ರೀ ಚೆಲುವ ವಿನಾಯಕಸ್ವಾಮಿ ದೇವಸ್ಥಾನವು ಮುಜರಾಯಿ ಇಲಾಖೆಗೆ ಸೇರಿದ ದೇವಸ್ಥಾನವಾಗಿರುತ್ತದೆ. ಈ ಸಂಸ್ಥೆಯ ಹೆಸರು ಅಧಿಸೂಚಿತ ಪಟ್ಟಿಯಲ್ಲಿ ಬಿಟ್ಟುಹೋಗಿರುವುದರಿಂದ ಈ ದೇವಸ್ಥಾನವನ್ನು ಕರ್ನಾಟಕ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಕಲಂ 23ರನ್ವಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ರಾಮಚಂದ್ರಯ್ಯ**

ಪಿ.ಆರ್.59

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

**ವಿಷಯ :** ಬಳ್ಳಾರಿ ನಗರ ವರ್ತುಲ ರಸ್ತೆ ನಿರ್ಮಾಣಕ್ಕಾಗಿ ಆಂದ್ರಾಳು, ಮುಂಡರಗಿ, ಪಿ.ಬೂದಿಹಾಳು ಮತ್ತು ಬಿ.ಗೊನಾಳು ಗ್ರಾಮಗಳ ಪಟ್ಟಾದಾರರು ಬಿಟ್ಟುಕೊಡುವ ಜಮೀನಿನ ಉಳಿದ ವಿಸ್ತೀರ್ಣವನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಭೂಪರಿವರ್ತನೆಗೊಳಿಸಿಕೊಳ್ಳಲು ಭೂಪರಿವರ್ತನಾ ಶುಲ್ಕದಿಂದ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು ಬಳ್ಳಾರಿ ರವರ ಪತ್ರ ಸಂಖ್ಯೆ : ಕಂ:ಭೂಪ:85/2009–10, ದಿನಾಂಕ 13–8–09 ಮತ್ತು 26–9–2009.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು ಬಳ್ಳಾರಿ ಜಿಲ್ಲೆ ರವರು, ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಬಳ್ಳಾರಿ ನಗರದಲ್ಲಿ ದಿನೇ ದಿನೇ ಹೆಚ್ಚುತ್ತಿರುವ ಗಣಿ ಚಟುವಟಿಕೆಗಳಿಂದಾಗಿ ಲಾರಿಗಳ ಸಂಚಾರ ಹೆಚ್ಚಾಗಿದ್ದು, ಸಂಚಾರಿ ವ್ಯವಸ್ಥೆ ಮತ್ತು ವಾಯು ಮಾಲಿನ್ಯದಿಂದ ಪರಿಸ್ಥಿತಿಯು ತೀರ ಹದಗೆಟ್ಟಿರುವ ಹಿನ್ನೆಲೆಯಲ್ಲಿ, ಜಿಲ್ಲಾ ಉಸ್ತುವಾರಿ ಸಚಿವರು ಅಲ್ಲಿನ ರೈತರ ಮನ ಒಲಿಸಿ, ವರ್ತುಲ ರಸ್ತೆಗೆ ಅಗತ್ಯವಿರುವ ಪಟ್ಟಾ ಜಮೀನುಗಳನ್ನು ಸರ್ಕಾರದಿಂದ ಯಾವುದೇ ಪರಿಹಾರವನ್ನು ಕೇಳದೆ ಉಚಿತವಾಗಿ ನೀಡಲು ಪಟ್ಟಾದಾರರನ್ನು ಒಪ್ಪಿಸಲಾಗಿದೆ ಎಂಬುದಾಗಿ ವರದಿ ಮಾಡುತ್ತಾ, ರೈತರೊಡನೆ ನಡೆಸಿದ ಸಂಧಾನದಲ್ಲಿ ವರ್ತುಲ ರಸ್ತೆಗಾಗಿ ಜಮೀನು

ಬಿಟ್ಟುಕೊಟ್ಟಿರುವ ಪಟ್ಟಾದಾರರು/ರೈತರು ಈ ಕೆಳಕಂಡ ಬೇಡಿಕೆಯನ್ನು ಈಡೇರಿಸುವಂತೆ ಕೋರಿರುತ್ತಾರೆಂದು ವರದಿ ಮಾಡಿರುತ್ತಾರೆ.

1) ವರ್ತುಲ ರಸ್ತೆಗಾಗಿ ಬಿಟ್ಟುಕೊಡುವ ಜಮೀನುಗಳ ಪೈಕಿ ಉಳಿದಿರುವ ವಿಸ್ತೀರ್ಣವನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಭೂಪರಿವರ್ತನೆಗೊಳಿಸಿಕೊಳ್ಳಲು ಭೂಪರಿವರ್ತನಾ ಶುಲ್ಕದಿಂದ ವಿನಾಯಿತಿ ನೀಡುವುದು.

2) ಒಂದು ವೇಳೆ ಸದರಿ ಜಮೀನುಗಳ ಭೂಪರಿವರ್ತನೆ ಕೋರುವ ಉದ್ದೇಶಕ್ಕೆ ವಿರುದ್ಧವಾಗಿ ಉಪಯೋಗಕ್ಕೆ ಕಾಯ್ದಿರಿಸಿದಲ್ಲಿ, ಸರ್ಕಾರದ ವತಿಯಿಂದ ಭೂ ಉಪಯೋಗ ಬದಲಾವಣೆ ಮಾಡಿಸಿಕೊಡುವುದು.

2. ಬಳ್ಳಾರಿ ವರ್ತುಲ ರಸ್ತೆಗಾಗಿ ಸರ್ಕಾರಕ್ಕೆ ಉಚಿತವಾಗಿ ಬಿಟ್ಟುಕೊಟ್ಟಿರುವ ಜಮೀನುಗಳ ವಿವರ, ಭೂಪರಿವರ್ತನೆಗೆ ಕೋರಿರುವ ವಿಸ್ತೀರ್ಣ, ಸರ್ಕಾರಕ್ಕೆ ಬಿಟ್ಟುಕೊಟ್ಟ ಜಮೀನಿನ ಮಾರ್ಗಸೂಚಿ ದರ ಮತ್ತು ಪ್ರಚಲಿತ ಮಾರುಕಟ್ಟೆ ದರ ಹಾಗೂ ಭೂ ಪರಿವರ್ತನೆ ಶುಲ್ಕ ಮನ್ನಾ ಮಾಡಲು ಪರಿಗಣಿಸಬೇಕಾಗಿರುವ ಮೊತ್ತ ಇವುಗಳ ವಿವರಗಳು ಈ ಕೆಳಕಂಡಂತಿರುತ್ತದೆ.

| ಬಳ್ಳಾರಿ ವರ್ತುಲ ರಸ್ತೆಗೆ ಸರ್ಕಾರಕ್ಕೆ ಉಚಿತವಾಗಿ ಜಮೀನು ಬಿಟ್ಟುಕೊಟ್ಟ ಮಾಹಿತಿ ಮತ್ತು ಇತರೇ ಮಾಹಿತಿ | | | | | | | | | |
|---|---|---|---|---|---|---|---|---|---|
| ಜಮೀನಿನ ವಿವರ | | | | | | | | | |
| ಕ್ರ. ಸಂ | ಗ್ರಾಮದ ಹೆಸರು | ಪಟ್ಟಾ ದಾರರ ಸಂಖ್ಯೆ | ಒಟ್ಟು ವಿಸ್ತೀರ್ಣ ಎಕರೆ ಗಳಲ್ಲಿ | ವರ್ತುಲ ರಸ್ತೆಗೆ ಉಚಿತವಾಗಿ ಜಮೀನು ಬಿಟ್ಟುಕೊಟ್ಟ ವಿಸ್ತೀರ್ಣ | ಉಳಿದ/ ಭೂಪರಿ ವರ್ತನೆಗೆ ಕೋರಬಹು ದಾದ ವಿಸ್ತೀರ್ಣ | ಸರ್ಕಾರಕ್ಕೆ ಬಿಟ್ಟುಕೊಟ್ಟ ಜಮೀನು | | ಭೂಪರಿವರ್ತನೆ ಶುಲ್ಕ ರೂ. | |
| | | | | | | ಮಾರ್ಗ ಸೂಚಿ ಬೆಲೆ | ಪ್ರಚಲಿತ ಮಾರುಕಟ್ಟೆ ಬೆಲೆ | ವಸತಿ | ವಸತಿಯೇತರ |
| 1 | 2 | 3 | 4 | 5 | 6 | 7 | 8 | 9 | 10 |
| 1 | ಅಂದ್ರಾಳು ಗ್ರಾಮ | 24 | 85.41 | 11.02 | 74.39 | 120833.000 | 2500000.00 | 2430125.00 | 4860250.00 |
| 2 | ಮುಂಡರಗಿ ಗ್ರಾಮ | 18 | 80.99 | 10.32 | 70.67 | 300000.000 | 3500000.00 | 2308603.00 | 4617205.00 |
| 3 | ಪಾತ್ರಬೂದಿಹಾಳ್ ಗ್ರಾಮ | 9 | 39.79 | 7.93 | 31.86 | 150000.000 | 3000000.00 | 1040783.00 | 2081565.00 |
| 4 | ಬಿ.ಗೋನಾಳ್ ಗ್ರಾಮ | 25 | 63.56 | 9.21 | 54.35 | 250000.000 | 3000000.00 | 1775472.00 | 3550943.00 |
| | **ಒಟ್ಟು** | **76** | **269.75** | **38.48** | **231.27** | **820833.000** | **12000000.00** | **7554983.00** | **15109963.00** |

3) ಜಮೀನುಗಳ ಪಟ್ಟಾದಾರರು ಒಟ್ಟು 38.48 ಎ/ಗು ಜಮೀನನ್ನು ಸರ್ಕಾರಕ್ಕೆ ಬಿಟ್ಟು ಕೊಟ್ಟಿರುತ್ತಾರೆ. ಇದರ ಮೌಲ್ಯ ರೂ.1,20,000,000/– ಆಗಿದ್ದು ಉಳಿದ ಜಮೀನು 231.27 ಎ/ಗು ಆಗಿರುತ್ತದೆ. ಒಡಂಬಡಿಕೆಯಂತೆ ಭೂ ಪರಿವರ್ತನೆಗೊಳಿಸಲು ಶುಲ್ಕ ವಿನಾಯಿತಿ ನೀಡಲು ಪ್ರಸ್ತಾವನೆ ಸಲ್ಲಿಸಲಾಗಿದ್ದು, ಇದಕ್ಕೆ ಪ್ರಚಲಿತ ವಸತಿಯೇತರ ಭೂ ಪರಿವರ್ತನೆ ದರದಂತೆ ಒಟ್ಟು ರೂ.1,51,09,963/–ಗಳ ವಿನಾಯಿತಿ ನೀಡಬೇಕಾಗುತ್ತದೆ.

4) ಕರ್ನಾಟಕ ಭೂಕಂದಾಯ ನಿಯಮಗಳು 1966 ರ ನಿಯಮ 108 ರನ್ವಯ ಕೆಲವು ಪ್ರಕರಣಗಳಲ್ಲಿ ಭೂಪರಿವರ್ತನಾ ಶುಲ್ಕ ಪಾವತಿಸುವಿಕೆಯಿಂದ ವಿನಾಯಿತಿ ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ. ಆದರೆ ಈ ಪ್ರಕರಣವು ನಿಯಮ 108 ರಲ್ಲಿ ಅವಕಾಶ ಕಲ್ಪಿಸಿರುವ ಪ್ರಕರಣಗಳಲ್ಲಿ ಒಂದಾಗಿರುವುದಿಲ್ಲ. ಆದರೆ ಬಳ್ಳಾರಿ ವರ್ತುಲ ರಸ್ತೆ ನಿರ್ಮಾಣವು ಒಂದು ಸಾರ್ವಜನಿಕ ಉದ್ದೇಶವನ್ನೊಳಗೊಂಡಿದ್ದು, ವರ್ತುಲ ರಸ್ತೆ ನಿರ್ಮಾಣಕ್ಕಾಗಿ ಅಲ್ಲಿನ ಪಟ್ಟಾದಾರರು ತಮ್ಮ ಜಮೀನನ್ನು ಉಚಿತವಾಗಿ ಬಿಟ್ಟುಕೊಡುವುದಕ್ಕೆ ಒಪ್ಪಿಗೆ ನೀಡಿರುವುದರಿಂದ ಸರ್ಕಾರಕ್ಕೆ ಹೆಚ್ಚಿನ ಆರ್ಥಿಕ ಹೊರೆ ಬೀಳುವ ಸಾಧ್ಯತೆ ಇರುವುದಿಲ್ಲ.

ಆದ್ದರಿಂದ, ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ ನಂತರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 31 : ಎಲ್‌ಜಿಇ 2009, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಳ್ಳಾರಿ ನಗರದಲ್ಲಿನ ವರ್ತುಲ ರಸ್ತೆ ನಿರ್ಮಾಣಕ್ಕಾಗಿ ಅಂದ್ರಾಳು, ಮುಂಡರಗಿ, ಪಿ.ಬೂದಿಹಾಳು ಮತ್ತು ಬಿ.ಗೊನಾಳು ಗ್ರಾಮಗಳ ಪಟ್ಟಾದಾರರು ಉಚಿತವಾಗಿ ಬಿಟ್ಟುಕೊಟ್ಟಿರುವ ಒಟ್ಟು

ವಿಸ್ತೀರ್ಣ 38.48 ಎಕರೆಗೆ ಯಾವುದೇ ರೀತಿಯ ಪರಿಹಾರವನ್ನು ಭವಿಷ್ಯದಲ್ಲಿ ಕ್ಲೈಮ್ ಮಾಡಬಾರದೆಂಬ ಷರತ್ತಿಗೊಳಪಟ್ಟು, ಕರ್ನಾಟಕ ಭೂಕಂದಾಯ ನಿಯವಗಳು 1966ರ ನಿಯಮ 108ನ್ನು ಸಡಿಲಿಸಿ, ಪಟ್ಟಾದಾರರ ಉಳಿದ 231.27 ಎಕರೆ ಜಮೀನಿಗೆ ವಸತಿಯೇತರ ಭೂ ಪರಿವರ್ತನಾ ಶುಲ್ಕ ರೂ.1,51,09,963/–ರೂ.ಗಳ (ಒಂದು ಕೋಟಿ ಐವತ್ತೊಂದು ಲಕ್ಷದ ಒಂಬತ್ತು ಸಾವಿರ ಒಂಭೈನೂರ ಅರವತ್ತಮೂರು ರೂಪಾಯಿಗಳು ಮಾತ್ರ) ಪಾವತಿಸುವಿಕೆಯಿಂದ ವಿನಾಯ್ತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 116 ವೆಚ್ಚ 7/2009, ದಿನಾಂಕ 23–11–2009ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ನರಸಿಂಹಲು,**

ಪಿ.ಆರ್.60

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ನಗರಕ್ಕೆ ಪರ್ಯಾಯವಾಗಿ ಉಪನಗರಗಳನ್ನು ನಿರ್ಮಾಣ ಮಾಡಲು ಉದ್ದೇಶಿಸಿದ್ದು, ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯನ್ನು ಘೋಷಿಸುವ ಬಗ್ಗೆ.

**ಓದಲಾಗಿದೆ :** ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು, ಬೆಂಗಳೂರು ರವರು ಕಡತ ಸಂಖ್ಯೆ. ನಆಇ 431 ಮೈಅಪ್ರಾ 2009, ದಿನಾಂಕ 1–10–2009 ರಲ್ಲಿ ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ :**

ಮೇಲೆ ಓದಲಾದ ಕಡತದಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರು, ಬೆಂಗಳೂರು ಇವರು ಮೈಸೂರು ಸ್ಥಳೀಯ ಯೋಜನಾ ಪ್ರದೇಶಕ್ಕೆ ಸೇರಿಸಬೇಕಾದ ಜಯಪುರ ಹೋಬಳಿಯ (3) ಗ್ರಾಮದ ವಿಸ್ತೀರ್ಣ ಹಾಗೂ ಇಲವಾಲ ಹೋಬಳಿಯ (4) ಗ್ರಾಮಗಳ ವಿಸ್ತೀರ್ಣಗಳ ಯಾದಿ ಹಾಗೂ ವಿಸ್ತರಿಸಲು ಉದ್ದೇಶಿಸಿರುವ ಪ್ರದೇಶವನ್ನು ಒಳಗೊಂಡಿರುವ ನಕ್ಷೆಯನ್ನು ಹಾಗೂ ಮೈಸೂರು ನಗರದ ಮಹಾ ಯೋಜನೆಯ ಪರಿಷ್ಕರಣೆಯ ಕಾರ್ಯವು ಪ್ರಗತಿಯಲ್ಲಿರುವುದರಿಂದ, ಸದರಿ ನಗರಕ್ಕೆ ಪರ್ಯಾಯವಾಗಿ 3 ಉಪ ನಗರಗಳನ್ನು ನಿರ್ಮಾಣ ಮಾಡಲು ಪ್ರಾಧಿಕಾರವು ಉದ್ದೇಶಿಸಿರುವುದರಿಂದ ಹಾಲಿ ಇರುವ ಸ್ಥಳೀಯ ಯೋಜನಾ ಪ್ರದೇಶವನ್ನು ವಿಸ್ತರಿಸುವುದು ಅವಶ್ಯಕವಾಗಿರುವುದರಿಂದ ನಗರಾಭಿವೃದ್ಧಿ ಪ್ರಾಧಿಕಾರವು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೈಸೂರು ನಗರವು ಕರ್ನಾಟಕ ರಾಜ್ಯದ ಎರಡನೇ ಮುಖ್ಯ ನಗರ ಕೇಂದ್ರವಾಗಿದ್ದು, ರಾಜಧಾನಿ ಬೆಂಗಳೂರಿನಿಂದ 140 ಕಿ.ಮೀ. ದೂರದಲ್ಲಿದ್ದು, ಈ ನಗರವು ಪ್ರವಾಸೋದ್ಯಮ, ವಿದ್ಯಾಭ್ಯಾಸ ಹಾಗೂ ಆಡಳಿತಕ್ಕೆ ಕೇಂದ್ರ ಬಿಂದುವಾಗಿರುತ್ತದೆ. ಪ್ರಸ್ತುತ ಮೈಸೂರು ನಗರದ ಬೆಳವಣಿಗೆಯು ಒಂದು ಪ್ರಮುಖವಾದ ಘಟ್ಟವಾಗಿರುತ್ತದೆ. ಮುಂಬರುವ ದಿನಗಳಲ್ಲಿ ನಗರದ ಬೆಳವಣಿಗೆಯನ್ನು ನಿಯಂತ್ರಿಸುವುದು ಅಸಾಧ್ಯವಾಗುವುದಲ್ಲದೇ, ಯೋಜನಾಬದ್ಧವಲ್ಲದ ಬೆಳವಣಿಗೆಗೆ ಪೂರಕವಾದ ಚಟುವಟಿಕೆಗಳಿಗೆ ಆಸ್ಪದ ನೀಡಿದಂತಾಗುತ್ತದೆ.

ಮೈಸೂರು ಹಾಗೂ ಬೆಂಗಳೂರು ನಗರಗಳ ನಡುವೆ ಚತುಷ್ಪಥ ರಸ್ತೆ ಕಾರ್ಯನಿರತವಾಗಿದ್ದು, ಬಿ.ಎಂ.ಐ.ಸಿ. ಯೋಜನೆ ಹಾಗೂ ಬೆಂಗಳೂರು ರೈಲ್ವೆ ಮಾರ್ಗದ ದ್ವಿಮುಖ (Double tract) ಯೋಜನೆಯು ಪೂರ್ಣಗೊಂಡಲ್ಲಿ ಮುಂಬರುವ ದಿನಗಳಲ್ಲಿ ಮೈಸೂರು ನಗರವು ತೀವ್ರಗತಿಯಲ್ಲಿ ಬೆಳೆಯುವ ಸಾಧ್ಯತೆಯಿದ್ದು, ಈ ಹಂತದಲ್ಲಿ ನಗರದ ಯೋಜಿತ ಬೆಳವಣಿಗೆ, ಅಭಿವೃದ್ಧಿಗೆ ಹಾಗೂ ನಿರ್ವಹಣೆಗೆ ಎಲ್ಲಾ ರೀತಿಯ ಮುಂಜಾಗರೂಕತೆಯ ಕಾರ್ಯನೀತಿಗಳನ್ನು ರೂಪಿಸುವುದು ಅವಶ್ಯಕವಾಗಿರುತ್ತದೆ. ಇದಲ್ಲದೆ ಮೈಸೂರು ನಗರದ ಹಾಲಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಹೊಂದಿಕೊಂಡಂತೆ ಹೊರ ಭಾಗದ ಗ್ರಾಮಾಂತರ ಪ್ರದೇಶಗಳಲ್ಲಿ ಗ್ರಾಮ ಪಂಚಾಯಿ ವ್ಯಾಪ್ತಿಗಳಲ್ಲಿ ತೀವ್ರವಾದ ಬೆಳವಣಿಗೆಗಳು ಬರುತ್ತಿದ್ದು ಅವುಗಳನ್ನು ನಿಯಂತ್ರಿಸುವುದೂ ಸಹ ಅತ್ಯವಶ್ಯಕವಾಗಿರುವುದರಿಂದ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಪ್ರಸ್ತಾವನೆ ಹಾಗೂ ಮೇಲ್ಕಂಡ ಅಂಶಗಳನ್ನು ಗಮನಿಸಿದಲ್ಲಿ ಹಾಲಿ ಇರುವ ಮೈಸೂರು ನಗರದ ಸ್ಥಳೀಯ ಯೋಜನಾ ಪ್ರದೇಶವನ್ನು ವಿಸ್ತರಿಸಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4(ಎ)(1) ರನ್ವಯ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲು ಶಿಫಾರಸು ಮಾಡಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕೇಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಆಇ 431 : ಮೈಅಪ್ರಾ 2009, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಮೈಸೂರು ನಗರದ ಹಾಲಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಅನುಬಂಧ–1 ರಲ್ಲಿ ತೋರಿಸಿರುವಂತೆ (7) ಗ್ರಾಮಗಳನ್ನು ಸೇರಿಸಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಕಲಂ 4(ಎ)(1) ರನ್ವಯ ಮೈಸೂರು ಸ್ಥಳೀಯ ಯೋಜನಾ ಪ್ರದೇಶವನ್ನು ವಿಸ್ತರಿಸಿ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶವನ್ನು ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**

ಪಿ.ಆರ್.61

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

## ಅನುಬಂಧ–1

| ಕ್ರ.ಸಂ. | ಹೋಬಳಿ | ಗ್ರಾಮದ ಹೆಸರು | ವಿಸ್ತೀರ್ಣ |
|---|---|---|---|
| 1 | ಜಯಪುರ | 1) ಧನಗಳ್ಳಿ<br>2) ದಾರಿಪುರ<br>3) ಬರಡನಪುರ | 1531 ಎಕರೆ 16 ಗುಂಟೆ<br>723 ಎಕರೆ 14 ಗುಂಟೆ<br>787 ಎಕರೆ 22 ಗುಂಟೆ |
| 2 | ಇಲವಾಲ | 1) ನಾಗವಾಲ<br>2) ಕಮರಹಳ್ಳಿ<br>3) ಮಾಣಿಕ್ಯಪುರ<br>4) ಬೊಮ್ಮೇನಹಳ್ಳಿ | 2287 ಎಕರೆ 23 ಗುಂಟೆ<br>748 ಎಕರೆ 39 ಗುಂಟೆ<br>521 ಎಕರೆ<br>1700 ಎಕರೆ 20 ಗುಂಟೆ |

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದ ಹಿರಿಯ ನಿರ್ದೇಶಕರ ಹುದ್ದೆಯನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ ಡಿಇಇ 77, ಇಎನ್‌ವಿ 86, ದಿನಾಂಕ 4–12–1986
2. ಸರ್ಕಾರಿ ಆದೇಶ ಸಂಖ್ಯೆ ಡಿಪಿಎಆರ್ 28, ಎಸ್‌ಇಎಂ 88, ದಿನಾಂಕ 25–5–1988
3. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 211, ಸಅಸೇ 2001, ದಿನಾಂಕ 6–2–2004
4. ಕಡತ ಸಂಖ್ಯೆ ಅಪಜೀ 69, ಇಪಿಸಿ 2008.

**ಪ್ರಸ್ತಾವನೆ :**

ಮೇಲೆ (1) ಮತ್ತು (2) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶಕ್ಕೆ ಇತರ ಹುದ್ದೆಗಳೊಡನೆ ನಿರ್ದೇಶಕರು (ತಾಂತ್ರಿಕ) ಈ ಹುದ್ದೆಯನ್ನು ಸೃಜಿಸಲಾಗಿತ್ತು, ತರುವಾಯ ಮೇಲೆ (3)ರಲ್ಲಿ ಓದಲಾದ ದಿನಾಂಕ 6–2–2004ರ ಆದೇಶದಲ್ಲಿ ಡಾ॥ ಎಂ.ಹೆಚ್. ಬಾಲಕೃಷ್ಣಯ್ಯ, ನಿರ್ದೇಶಕರು (ತಾಂತ್ರಿಕ) ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರಿಗೆ ಬಡ್ತಿ ನೀಡಿ ಸದರಿ ಹುದ್ದೆಯನ್ನು ಹಿರಿಯ ನಿರ್ದೇಶಕರು (ತಾಂತ್ರಿಕ) ಎಂದು ಉನ್ನತೀಕರಿಸಲಾಗಿತ್ತು. ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯು ಮೇಲೆ (4)ರಲ್ಲಿ ಓದಲಾದ ತನ್ನ ಕಡತದಲ್ಲಿ ಸದರಿ ಹುದ್ದೆಯನ್ನು ವಿಶೇಷ ನಿರ್ದೇಶಕರ ಹುದ್ದೆಗೆ ಉನ್ನತೀಕರಿಸುವಂತೆ ಕೋರಿದೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 772 ಸಅಸೇ 2008, ಬೆಂಗಳೂರು, ದಿನಾಂಕ: 2ನೇ ಜನವರಿ 2010.**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ತಾಂತ್ರಿಕ ಕೋಶದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ನಿರ್ದೇಶಕರು (ತಾಂತ್ರಿಕ) ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಿಶೇಷ ನಿರ್ದೇಶಕರು (ತಾಂತ್ರಿಕ) ಎಂದು ಉನ್ನತೀಕರಿಸಿ, ಈ ಹುದ್ದೆಯ ವೇತನ ಶ್ರೇಣಿಯನ್ನು ರೂ. **28275–675–30300–750–34800–850–39900** ಕ್ಕೆ ನಿಗದಿಪಡಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 1797 ಸೇವೆಗಳು–3/2009, ದಿನಾಂಕ 2–12–2009 ರಲ್ಲಿ ಮತ್ತು ಸಿ.ಆ.ಸು.ಇ. (ಸೇವಾ ನಿಯಮ) ವಿಭಾಗವು ತನ್ನ ಅನಧಿಕೃತ ಟಿಪ್ಪಣಿ ಸಂಖ್ಯೆ ಸಿಆಸುಇ 37 ಸೇನಿಡಿ 2009, ದಿನಾಂಕ 14–12–2009 ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–3).

ಪಿ.ಆರ್.62

**HEALTH AND FAMILY WELFARE SECRETARIAT**

**Sub :** Providing consultancy services for Internal Audit of Karnataka Health System Development & Reform Project (IDA Credit 4229-IN) for 2009-10-reg.

**Read: Govt. Order No. HFW (PR) 43 WBA Bangalore, dated 28.02.2009.**

**Preamble:**

In the G.O. read above, approval was accorded for engaging the services of Roy Ghosh & Associates, Chartered Accountants, Howrah for conducting Internal Audit of the World Bank assisted Karnataka Health System Development & Reform Project (IDA Credit 4229-IN) for 2008-09.

It was decided to continue the Internal Audit for 2009-10 also. In the May 2009 Implementation Support Mission taken up by the World Bank, it was agreed that Internal Auditors for 2009-10 would be selected by using the list of Bangalore based Chartered Accountants (CAs) on the Comptroller and Auditor General (C & AG) panel for major audits. Accordingly, Expression of interest (EoI) dated 15.7.2009 was issued to 17 CA firms on the C & AG list for which responses were received from 12 firms within the prescribed date & time. After evaluating the responses in accordance with the stipulated criteria, ranking list of the responding firms was prepared and Letter of Invitation (LoI) dated 19.9.2009 was issued to the first six ranked CA firms seeking technical and financial bids for the assignment. None of the three technical bids received for the LoI dated 19.9.2009 failed to qualify technically by securing the minimum stipulated marks of 75.

Subject was once again discussed at the October 2009 Implementations Support Mission taken up by the World Bank. To expedite the process of appointment of Internal Auditor for 2009-10, it was agreed that LoI may be issued to the next six CA firms who had responded to the EoI dated 15.7.2009 and Fixed Budget Selection (FBS) method may be followed for engaging the services of the CA firm. Budget of Rs. 3.80 lakhs was approved for the assignment. LoI dated 21.10.2009 was issued to the next six CA firms of which two responded. Technical evaluation of the bids was done as per the stipulated criteria and both the bids were found to qualify technically with Patel Mohan Ramesh & Co., Chartered Accountants, Bangalore obtaining T 1 rank and S.R.R.K. Sharma Associates, Chartered Accountants, Bangalore obtaining T 2 rank.

As per the FBS method of selection, firm which has secured the highest technical ranking and submitted financial bid within the approved budget is to be selected. Patel Mohan Ramesh & Co., Chartered Accountants, Bangalore technically ranked the highest of the two bidders have submitted financial bid of Rs. 3.60 lakhs with service tax being extra, as applicable and the bid is found to be acceptable. Accordingly, they are eligible to be appointed as Project Internal Auditors for 2009-10.

Hence the following order.

**Government Order No. HFW (PR) 145 2009 Bangalore, Dated 29th December 2009**

In the circumstances mentioned in the preamble, approval is accorded for appointment of Patel Mohan Ramesh & Co., Chartered Accountants, Bangalore as Project Internal Auditors for the year 2009-10, on a remuneration of Rs. 3,60,000-00 (Rupees three lakhs sixty thousand only) (inclusive of all expenses) + Service Tax, as applicable.

The Chartered Accountant firm shall enter into a contract with the Project which shall include Terms of Reference (ToR) with personnel and reporting obligations.

The above expenditure towards this consultancy shall be debitable to Head of account “2210-06-800-0-84 KHSDRP Project Management and Evaluation – EAP – 051”.

By order and in the name of the Governor of Karnataka,
**(M. Shashidhar)**
Deputy Secretary to Government,
KHSDRP
Health & Family Welfare Department.

PR. 31

**ಶಿಕ್ಷಣ ಸಚಿವಾಲಯ**

**ತಿದ್ದುಪಡಿ ಆದೇಶ**

**ವಿಷಯ: ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ದುರಸ್ತಿ ಹಾಗೂ ಕಟ್ಟಡ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ ಮಾಡಿದ ಆದೇಶಕ್ಕೆ ತಿದ್ದುಪಡಿ ಮಾಡುವ ಬಗ್ಗೆ.**

**ಉಲ್ಲೇಖ:ದಿನಾಂಕ 17–11–2009ರ ಆದೇಶ ಸಂಖ್ಯೆ: ಇಡಿ 216 ಯೋಸಕ 2009, (ಇಡಿ 143 ಸ್ವೀಮರ (ಯುನಿಕ್) 2009, ದಿನಾಂಕ: 17–11–2009).**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಸರ್ಕಾರಿ ಆದೇಶದ ಅನುಬಂಧ–1 ರಲ್ಲಿ ತೋರಿಸಿರುವ ಶಿರಸಿ ತಾಲ್ಲೂಕಿನ

| ಕ್ರ.ಸಂ. | ಶಾಲೆಯ ಹೆಸರು | ಅಂದಾಜು ಮೊತ್ತ (ಲಕ್ಷಗಳಲ್ಲಿ) |
|---|---|---|
| 14 | ಹಿ. ಪ್ರಾ.ಶಾಲೆ, ಶಿರಸಿ ಪಂಚಲಿಂಗ | 8.00 |
| 15 | ಹಿ.ಪ್ರಾ.ಶಾಲೆ, ಶಿರಸಿ ಬೆಣವಾಂವ | 6.00 |

**ಎಂಬುದಕ್ಕೆ ಬದಲಾಗಿ**

| ಕ್ರ.ಸಂ. | ಶಾಲೆಯ ಹೆಸರು | ಅಂದಾಜು ಮೊತ್ತ (ಲಕ್ಷಗಳಲ್ಲಿ) |
|---|---|---|
| 14 | ಸ.ಹಿ.ಪ್ರಾಶಾಲೆ, ಶಿರಸಿ ಪಂಚಲಿಂಗ | 0.80 |
| 15 | ಸ.ಹಿ.ಪ್ರಾಶಾಲೆ, ಶಿರಸಿ ಬೆಣವಾಂವ | 0.60 |
| 15ಎ | ಸ.ಹಿ.ಪ್ರಾ.ಶಾಲೆ, ಶಿರಸಿ ಬರೂರು 3 ಕೊಠಡಿ ನಿರ್ಮಾಣ | 12.60 |

ಎಂದೂ,

ಅನುಬಂಧ–2ರಲ್ಲಿನ ಯಲ್ಲಾಪುರ ತಾಲ್ಲೂಕಿನ

| ಕ್ರ.ಸಂ. | ಶಾಲೆಯ ಹೆಸರು | ಅಂದಾಜು ಮೊತ್ತ (ಲಕ್ಷಗಳಲ್ಲಿ) |
|---|---|---|
| 1 | ಹಿ.ಪ್ರಾ.ಶಾಲೆ, ಜಯಂತಿ ನಗರ | 4.20 |
| 3 | ಹಿ.ಪ್ರಾಶಾಲೆ, ಉಮ್ಮಚಗಿ | 4.20 |
| 4 | ಹಿ.ಪ್ರಾಶಾಲೆ, ಚೆನ್ನಾಪುರ | 4.20 |

**ಎಂಬುದಕ್ಕೆ ಬದಲಾಗಿ**

| ಕ್ರ.ಸಂ. | ಶಾಲೆಯ ಹೆಸರು | ಅಂದಾಜು ಮೊತ್ತ (ಲಕ್ಷಗಳಲ್ಲಿ) |
|---|---|---|
| 1 | ಸ.ಹಿ.ಪ್ರಾಶಾಲೆ, ಗುಳ್ಳಾಪುರ (1 ಕೊಠಡಿ) | 4.20 |
| 3 | ಸ.ಹಿ.ಪ್ರಾಶಾಲೆ, ಯಲ್ಲಾಪುರ (1 ಕೊಠಡಿ) | 4.20 |
| 4 | ಹಿ.ಪ್ರಾಶಾಲೆ, ದೇಹಳ್ಳಿ ( 1 ಕೊಠಡಿ) | 4.20 |

ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಐ.ಎಫ್. ಮಾಗಿ)**

ಪಿ.ಆರ್. 32

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಶಿಕ್ಷಣ ಇಲಾಖೆ (ಯೋಜನೆ)

## ಶಿಕ್ಷಣ ಸಚಿವಾಲಯ

ವಿಷಯ : 2009–10ನೇ ಸಾಲಿನಲ್ಲಿ ವಿವಿಧ ಸರ್ಕಾರಿ ಪಾಲಿಟೆಕ್ನಿಕ್‌ಗಳಿಗೆ ವಿವಿಧ ಪೀಠೋಪಕರಣಗಳನ್ನು ಖರೀದಿ ಮಾಡುವುದಕ್ಕೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

ಓದಲಾಗಿದೆ : 1) ಕಡತ ಸಂಖ್ಯೆ: ಡಿಟಿಇ 272 ಎಸ್.ಪಿ.ಎಸ್. (2) 2009

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ವಿವಿಧ ಸ್ಥಳಗಳಲ್ಲಿ ಹೊಸದಾಗಿ ಸರ್ಕಾರಿ ಪಾಲಿಟೆಕ್ನಿಕ್‌ಗಳನ್ನು ಪ್ರಾರಂಭ ಮಾಡಲಾಗಿದೆ. ಈ ಸರ್ಕಾರಿ ಪಾಲಿಟೆಕ್ನಿಕ್‌ಗಳಿಗೆ ಪೀಠೋಪಕರಣಗಳು. ಅಂದರೆ ಕೊಠಡಿಗಳಿಗೆ ಡೆಸ್ಕ್‌ಗಳು, ಕಛೇರಿ ಪೀಠೋಪಕರಣಗಳು. ಗ್ರಂಥಾಲಯಕ್ಕೆ ಬೇಕಾಗುವ ಪೀಠೋಪಕರಣಗಳು ಮತ್ತು ಲ್ಯಾಬ್‌ಗಳಿಗೆ ಬೇಕಾಗುವ ಕಂಪ್ಯೂಟರ್ ಛೇರ್ ಮತ್ತು ಟೇಬಲ್‌ಗಳನ್ನು ತುರ್ತಾಗಿ ಖರೀದಿಸಬೇಕೆಂದು ತಾಂತ್ರಿಕ ನಿರ್ದೇಶಕರು ಪ್ರಸ್ತಾಪಿಸಿರುತ್ತಾರೆ.

ಇಲಾಖಾ ಮುಖ್ಯಸ್ಥರಿಗೆ ಇಡಿ 131 ಟಿಪಿಇ 98 ದಿನಾಂಕ 19–12–2002ರಲ್ಲಿನ ಪ್ರತ್ಯಾಯೋಜನೆ ಅಧಿಕಾರದನ್ವಯ ಒಂದು ಪ್ರಸ್ತಾವನೆಗೆ ರೂ. 20,000–00ಗಳ ಮಿತಿಯಲ್ಲಿ ಖರೀದಿ ಮಾಡಲು ಮಾತ್ರ ತಿಳಿಸಲಾಗಿದೆ. 2008–09ನೇ ಸಾಲಿನಲ್ಲಿ ಪ್ರಾರಂಭ ಮಾಡಿರುವ ಹೊಸ ಪಾಲಿಟೆಕ್ನಿಕ್‌ಗಳಿಗೆ ಪೀಠೋಪಕರಣಗಳನ್ನು ಬಾಡಿಗೆ ಆಧಾರದ ಮೇಲೆ ಪಡೆಯುವುದರಿಂದ ಅದು ಸರ್ಕಾರಕ್ಕೆ ಅನಗತ್ಯ ಹೊರೆಯಾಗುತ್ತದೆ. ಪಾಲಿಟೆಕ್ನಿಕ್ ಕಾಲೇಜುಗಳಿಂದ ಬಂದಿರುವ ಪೀಠೋಪಕರಣಗಳ ಖರೀದಿ ಪ್ರಸ್ತಾವನೆಗಳನ್ನು ಕ್ರೋಢೀಕರಿಸಿ ಒಟ್ಟು ರೂ. 49,61,121–00 ಮೊತ್ತವನ್ನು 2009–10ನೇ ಸಾಲಿನ ರಾಜ್ಯ ಯೋಜನಾ ಲೆಕ್ಕ ಶೀರ್ಷಿಕೆ "2203–00–105–0–01–051" (ಸಾಮಾನ್ಯ ವೆಚ್ಚ) ಅಡಿ ಭರಿಸಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ : ಇಡಿ 340 ಯೋಸಕ 2009, ಬೆಂಗಳೂರು ದಿನಾಂಕ 29–12–2009.**

ರಾಜ್ಯದ ವಿವಿಧ ಸ್ಥಳಗಳಲ್ಲಿ ಹೊಸದಾಗಿ ಸರ್ಕಾರಿ ಪಾಲಿಟೆಕ್ನಿಕ್‌ಗಳಿಗೆ ಡೆಸ್ಕ್‌ಗಳು, ಕಂಪ್ಯೂಟರ್ ಛೇರ್, ಟೇಬಲ್, ಕಛೇರಿ ಪೀಠೋಪಕರಣಗಳನ್ನು ಖರೀದಿಸಲು ಇಲಾಖಾ ಮುಖ್ಯಸ್ಥರಿಗೆ ನೀಡಿರುವ ಆರ್ಥಿಕ ಅಧಿಕಾರದ ಮಿತಿಯನ್ನು ಸಡಿಲಗೊಳಿಸಿ ಲೆಕ್ಕಶೀರ್ಷಿಕೆ 2203–00–105–0–01–051" (ಸಾಮಾನ್ಯ ವೆಚ್ಚ) ರೂ. 49,61,000–00 ಲಕ್ಷ ಮೊತ್ತದ ಪೀಠೋಪಕರಣಗಳನ್ನು ಖರೀದಿಸಲು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಲಾಗಿದೆ.

ಪೀಠೋಪಕರಣಗಳ ಖರೀದಿಯನ್ನು ಮಾಡುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಶಿಇ 2975 ಐಎಫ್(ಬಿ) 2009 ದಿನಾಂಕ 30–11–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಐ.ಎಫ್. ಮಾಗಿ)**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ
ಕಾರ್ಯದರ್ಶಿ ಉನ್ನತ ಶಿಕ್ಷಣ ಇಲಾಖೆ (ಯೋಜನೆ)

ಪಿಆರ್ 33

## ಒಳಾಡಳಿತ ಸಚಿವಾಲಯ

ವಿಷಯ : ಕರ್ನಾಟಕ ರಾಜ್ಯದಲ್ಲಿ ವರದಕ್ಷಿಣೆ ಸಾವಿನ ಪ್ರಕರಣಗಳನ್ನು ಸಿ.ಐ.ಡಿ. ಇಲಾಖೆಯು ಇವರು ನಡೆಸುವ ಬದಲಾಗಿ ಸ್ಥಳೀಯ ಪೊಲೀಸರೇ ನಡೆಸುವ ಬಗ್ಗೆ.

ಓದಲಾಗಿದೆ : 1) ಪತ್ರ ಸಂಖ್ಯೆ: 2/ಸಿಬ್ಬಂದಿ–1/ಸಿಐಡಿ/07–08 ದಿನಾಂಕ 1–9–2009 ಪೊಲೀಸ್ ಮಹಾನಿರ್ದೇಶಕರು, ಸಿಐಡಿ, ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಬೆಂಗಳೂರು ಇವರಿಂದ

2) ಪತ್ರ ಸಂ. ಅಪರಾಧ/142/ಮಿಸ./2009 ದಿನಾಂಕ 19–12–2009 ಮಹಾ ನಿರ್ದೇಶಕರು, ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರಿಂದ.

**ಪ್ರಸ್ತಾವನೆ:**

ಮೇಲಿನ (1)ನೇ ಉಲ್ಲೇಖದಲ್ಲಿ ಓದಲಾದ ಪತ್ರದಲ್ಲಿ ಪೊಲೀಸ್ ಮಹಾ ನಿರ್ದೇಶಕರು, ಸಿಐಡಿ, ತರಬೇತಿ, ವಿಶೇಷ ಘಟಕಗಳು ಮತ್ತು ಆರ್ಥಿಕ ಅಪರಾಧಗಳು, ಬೆಂಗಳೂರು ಇವರು ವರದಕ್ಷಿಣೆ ಸಾವಿನ ಪ್ರಕರಣಗಳ ತನಿಖೆಯಲ್ಲಿ ಹೆಚ್ಚಿನ ತನಿಖಾ ಕೌಶಲ್ಯತೆ ಬೇಡದೇ ಇರುವುದರಿಂದ ಹಾಗೂ ಸಿಐಡಿಗೆ ಈ ಪ್ರಕರಣಗಳು ಬರುವ ವೇಳೆಗೆ ಸ್ಥಳೀಯ

ತನಿಖಾಧಿಕಾರಿಗಳೇ ಕಾಲು ಭಾಗದಷ್ಟು ತನಿಖೆ ಮುಗಿಸಿರುವುದರಿಂದ ಇನ್ನು ಮುಂದೆ ರಾಜ್ಯದಲ್ಲಿ ಎಲ್ಲಾ ವರದಕ್ಷಿಣೆ ಸಾವಿನ ಪ್ರಕರಣಗಳನ್ನು ಸ್ಥಳೀಯ ಪೊಲೀಸರೇ ನಿಯಮಾನುಸಾರ ತನಿಖೆ ಮಾಡಬೇಕೆಂದು ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಮೇಲಿನ (2)ನೇ ಉಲ್ಲೇಖದಲ್ಲಿ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು, ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು, ಸಹ ಸದರಿ ಪ್ರಸ್ತಾವನೆಯನ್ನು ಅನುಮೋದಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿರುತ್ತದೆ.

ಆದುದರಿಂದ ಈ ಆದೇಶ

**ಸರ್ಕಾರಿ ಆದೇಶ ಸಂ. ಒಇ 130 ಸಿಐಡಿ 2009 ಬೆಂಗಳೂರು ದಿನಾಂಕ 31–12–2009**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಇನ್ನು ಮುಂದೆ ರಾಜ್ಯದಲ್ಲಿ ವರದಕ್ಷಿಣೆ ಸಾವಿನ ಪ್ರಕರಣಗಳನ್ನು ಸರ್ಕಾರ ಮತ್ತು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಸಿಐಡಿಗೆ ವಹಿಸುವ ವಿಶೇಷ ಪ್ರಕರಣಗಳನ್ನು ಹೊರತು ಪಡಿಸಿ, ವರದಕ್ಷಿಣೆ ಸಾವಿನ ಪ್ರಕರಣಗಳ ತನಿಖೆಯನ್ನು ಸ್ಥಳೀಯ ಪೊಲೀಸರೇ ನಿಯಮಾನುಸಾರ ನಡೆಸುವಂತೆ ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಪಿ. ಶಿವರಾಮ ಭಟ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಅಪರಾಧಗಳು)

ಪಿಆರ್ 34

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ವಿಷಯ : ಶ್ರೀ ವಿ.ವಿ. ಪುಣೇದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ, ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ ಆದೇಶ.

ಓದಲಾಗಿದೆ : 1) ದಿನಾಂಕ : 09–03–07ರ ನೋಟೀಸು ಸಂಖ್ಯೆ : ಸಿಆಸುಇ 023 ಎಸ್‌ಇಎನ್ 07.
2) ಶ್ರೀ ವಿ.ವಿ. ಪುಣೇದ್, ಕೆಎಎಸ್. (ಕಿರಿಯ ಶ್ರೇಣಿ) ಇವರ ದಿನಾಂಕ : 20–03–07 ರ ಲಿಖಿತ ರಕ್ಷಣಾತ್ಮಕ ಹೇಳಿಕೆ.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಕಾರಣ ಕೇಳುವ ನೋಟಿಸಿನಲ್ಲಿ ಶ್ರೀ ವಿ.ವಿ. ಪುಣೇದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿರವರ ಸೇವೆಯನ್ನು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಹಿಂದಕ್ಕೆ ಪಡೆದು ದಿನಾಂಕ : 09–10–06ರ ಅಧಿಸೂಚನೆ ಸಂಖ್ಯೆ : ಸಿಆಸುಇ 183 ಆಸೇವ 06ರಲ್ಲಿ ಉಪ ವಿಭಾಗಾಧಿಕಾರಿ, ಸೇಡಂ ಉಪ ವಿಭಾಗ, ಸೇಡಂ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದ್ದರೂ ಇವರು ಸದರಿ ಹುದ್ದೆಯ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತ ಗೈರು ಹಾಜರಾಗಿ ಸರ್ಕಾರದ ಆದೇಶ / ನಿರ್ದೇಶನವನ್ನು ಪಾಲಿಸದಿರುವ ಮೂಲಕ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ತೀವ್ರ ದುರ್ನಡತೆ ಎಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, 1966 ರ ನಿಯಮ 3 ಅನ್ನು ಉಲ್ಲಂಘಿಸಿರುವ ಕಾರಣ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 11 ಮತ್ತು 11–ಎ ರನ್ವಯ ದೋಷಾರೋಪಣ ಪಟ್ಟಿಯನ್ನು ಜಾರಿಗೊಳಿಸಿ ಶಿಸ್ತು ಕ್ರಮವನ್ನು ಪ್ರಾರಂಭಿಸಲಾಯಿತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಪುಣೇದ್ ರವರು, ದಿನಾಂಕ : 09–03–07 ರ ಕಾರಣ ಕೇಳುವ ನೋಟೀಸಿಗೆ ಲಿಖಿತ ರಕ್ಷಣಾತ್ಮಕ ಹೇಳಿಕೆ ಸಲ್ಲಿಸಿ ಶಿಸ್ತು ಕ್ರಮವನ್ನು ಕೈಬಿಡುವಂತೆ ಮನವಿ ಮಾಡಿದ್ದು, ಸದರಿ ಲಿಖಿತ ರಕ್ಷಣಾತ್ಮಕ ಹೇಳಿಕೆಯಲ್ಲಿ ತಾನು ಡಿಎಮ್. ಹೆಚ್.ಟಿ.ಎನ್. ಮತ್ತು Veinous insufficiency of both legs with varicose ulcer ಖಾಯಿಲೆಗಳಿಂದ ಬಳಲುತ್ತಿದ್ದು ಈ ಖಾಯಿಲೆಗಳಿಗೆ ಬೆಂಗಳೂರಿನಲ್ಲಿ ಮಾತ್ರ ಚಿಕಿತ್ಸೆ ಲಭ್ಯವಿರುವ ಕಾರಣ, ಸ್ಥಳ ನಿಯುಕ್ತಿಗೊಳಿಸಲಾದ ಉಪ ವಿಭಾಗಾಧಿಕಾರಿ ಸೇಡಂ ಉಪ ವಿಭಾಗ, ಸೇಡಂ ಹುದ್ದೆಯ ಕರ್ತವ್ಯಕ್ಕೆ ಹಾಜರಾಗಲು ವೈದ್ಯಕೀಯ ಕಾರಣಗಳ ಮೇಲೆ ಸಾಧ್ಯವಾಗಲಿಲ್ಲವೆಂದು ತಿಳಿಸುತ್ತಾ ಅನಧಿಕೃತ ಗೈರು ಹಾಜರಿ ಅವಧಿಯನ್ನು ವೈದ್ಯಕೀಯ ಕಾರಣಗಳ ರಜೆಯನ್ನಾಗಿ ಮಂಜೂರು ಮಾಡುವಂತೆ ಮನವಿ ಮಾಡಿರುತ್ತಾರೆ. ಇವರ ರಕ್ಷಣಾತ್ಮಕ ಹೇಳಿಕೆಯಲ್ಲಿನ ಅಂಶಗಳ ಬಗ್ಗೆ ವೈದ್ಯಕೀಯ ಮಂಡಳಿಯ ಅಭಿಪ್ರಾಯ ಪಡೆದ ನಂತರ, ಸರ್ಕಾರವು ಶ್ರೀ ಪುಣೇದ್ ರವರು ಸಲ್ಲಿಸಿದ ರಕ್ಷಣಾತ್ಮಕ ಹೇಳಿಕೆಯನ್ನು ಅಂಗೀಕರಿಸುತ್ತಾ. ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 084 ಕೆಇವಿ 07, ಬೆಂಗಳೂರು, ದಿನಾಂಕ 21ನೇ ಡಿಸೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ವಿ.ವಿ. ಮಣೇದ್, ಕೆಎಎಸ್. (ಕಿರಿಯ ಶ್ರೇಣಿ) ಆಯುಕ್ತರು. ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957 ರ ನಿಯಮ 11 ಮತ್ತು 11–ಎ ರನ್ವಯ ದೋಷಾರೋಪಣ ಪಟ್ಟಿಯೊಂದಿಗೆ ದಿನಾಂಕ : 09–03–07 ರಂದು ಜಾರಿಗೊಳಿಸಿದ ನೋಟೀಸಿಗೆ ಇವರು ದಿನಾಂಕ 20–03–07 ರಂದು ಸಲ್ಲಿಸಿದ ಲಿಖಿತ ರಕ್ಷಣಾತ್ಮಕ ಹೇಳಿಕೆಯನ್ನು ಅಂಗೀಕರಿಸಿ ಇವರು ಇನ್ನು ಮುಂದೆ ಸರ್ಕಾರಿ ಕೆಲಸದ ಕಾರ್ಯನಿರ್ವಹಣೆಯಲ್ಲಿ ಹೆಚ್ಚಿನ ಜಾಗರೂಕತೆಯಿಂದ ಕರ್ತವ್ಯ ನಿರ್ವಹಿಸುವಂತೆ ಎಚ್ಚರಿಕೆ ನೀಡುತ್ತಾ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಡಲು ನಿರ್ಣಯಿಸಿದೆ.

ಇವರ ಅನಧಿಕೃತ ಗೈರು ಹಾಜರಿ ಅವಧಿಯನ್ನು ಈ ಕೆಳಕಂಡಂತೆ ಹೊಂದಾಣಿಕೆ ಮಾಡಿ ಸಕ್ರಮಗೊಳಿಸಿದೆ.

1. ದಿನಾಂಕ : 09–10–06 ರಿಂದ 24–11–06 ರವರೆಗಿನ 47 ದಿನಗಳು–ವೈದ್ಯಕೀಯ ಕಾರಣದ ಮೇಲೆ ಗಳಿಕೆ ರಜೆ.
2. ದಿನಾಂಕ : 25–11–06 ರಿಂದ 24–12–06 ರವರೆಗಿನ 30 ದಿನಗಳು–ವೈದ್ಯಕೀಯ ಕಾರಣದ ಮೇಲೆ ಅರ್ಧ ವೇತನ ರಜೆ.
3. ದಿನಾಂಕ 25–12–06 ರಿಂದ 31–07–07 ರವರೆಗಿನ ಅವಧಿಯು–ವೈದ್ಯಕೀಯ ಕಾರಣದ ಮೇಲೆ Extra-ordinary Leave.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಇವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಹೆಚ್.ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–2)

ಪಿಆರ್ 35

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ವಿಷಯ : ಶ್ರೀ ಎಚ್.ಆರ್. ಪಾಟೀಲ್, ಕೆ.ಎ.ಎಸ್. ಮತ್ತು ಶ್ರೀ ಎಸ್.ಬಿ. ಹೊನ್ನೂರ್ ಹಿಂದಿನ ಸಹಾಯಕ ನಿರ್ದೇಶಕರು ನಗರ ಯೋಜನಾ ಇಲಾಖೆ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ – ಆದೇಶ ತಿದ್ದುಪಡಿ ಮಾಡುವ ಬಗ್ಗೆ.

ಓದಲಾಗಿದೆ : ಸರ್ಕಾರಿ ಆದೇಶ ಸಂ : ಸಿಆಸುಇ 106 ಎಸ್ಇಎನ್ 91 ದಿನಾಂಕ: 13–05–1998.

**ಪ್ರಸ್ತಾವನೆ :**

ಶ್ರೀ ಎಚ್.ಆರ್. ಪಾಟೀಲ್, ಕೆ.ಎ.ಎಸ್. ಅಧಿಕಾರಿ ಇವರು ಆಯುಕ್ತರಾಗಿ ಹಾಗೂ ಶ್ರೀ ಎಸ್.ಬಿ. ಹೊನ್ನೂರ್, ಇವರು ಸಹಾಯಕ ನಿರ್ದೇಶಕರಾಗಿ ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ರಾಯಚೂರು ಮುನಿಸಿಪಲ್ ಪ್ರದೇಶದಲ್ಲಿನ ವಲಯ ನಿರ್ಬಂಧ ನಿಯಮಗಳನ್ನು 1961ರ ನಗರ ಮತ್ತು ಗ್ರಾಮ ಯೋಜನೆ ಕಾಯಿದೆಯ ನಿಯಮಗಳನ್ನು ಉಲ್ಲಂಘಿಸಿ ಅಕ್ರಮವಾಗಿ ಕಟ್ಟಡ ನಿರ್ಮಾಣಕ್ಕೆ ಅನುಮತಿ ನೀಡಿದ ಮತ್ತು ನಂಬಿಕೆ ದ್ರೋಹದ ಆರೋಪಗಳ ಮೇಲೆ ಸದರಿ ಅಧಿಕಾರಿಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ನಡೆದಿದ್ದು ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂ. (1)ರ ಆದೇಶದಲ್ಲಿ ಶ್ರೀ ಎಚ್.ಆರ್. ಪಾಟೀಲ್ ಕೆ.ಎ.ಎಸ್. ಅಧಿಕಾರಿ ಇವರಿಗೆ 1957ರ ಸಿ.ಸಿ.ಎ. ನಿಯಮಾವಳಿ 1957ರ ನಿಯಮ 8 (IV-A) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರ ವೇತನವನ್ನು ಒಂದು ಹಂತ ಕೆಳಗೆ ಇಳಿಸುವ ದಂಡನೆಯನ್ನು ಹಾಗೂ ಶ್ರೀ ಎಸ್.ಬಿ. ಹೊನ್ನೂರ್, ಅಂದಿನ ಸಹಾಯಕ ನಿರ್ದೇಶಕರು, ರಾಯಚೂರು ನಗರಾಭಿವೃದ್ಧಿ ಪ್ರಾಧಿಕಾರ ಇವರಿಗೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 8(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆ ಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು. ಶಿಸ್ತು ಪ್ರಾಧಿಕಾರವು ವಿಧಿಸಿದ ದಂಡನೆಯ ಆದೇಶದ ವಿರುದ್ಧ ಶ್ರೀ ಎಸ್.ಬಿ. ಹೊನ್ನೂರ್‌ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂ : 6452/1998 ಅನ್ನು ದಾಖಲಿಸಿ ತಮ್ಮ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ವಿಧಿಸಲಾಗಿದ್ದ ದಂಡನೆಯನ್ನು ರದ್ದುಗೊಳಿಸುವಂತೆ ಕೋರಿದ್ದರು.

ಈ ಸಂಬಂಧವಾಗಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿನಾಂಕ 26–11–08 ರಂದು ಈ ಕೆಳಕಂಡಂತೆ ಆದೇಶವನ್ನು ನೀಡಿರುತ್ತದೆ.

In that view of the matter, we find that the order of the inquiring authority and the order of the Disciplinary Authority hodling that the charge has been proved is not sustainable. For the aforesaid reasons, the application is allowed and the order of the Disciplinary Authority bearing No. ಸಿಆಸುಇ 106 ಎಸ್‌ಇಎನ್ 1991 Dt. 21-1-1993 and that of the Appellate Authority bearing No. ಸಿಆಸುಇ 106 ಎಸ್‌ಇಎನ್ 91 dt. 13-5-1998, so far as they relate to this applicant Sri S.B. Honnur are hereby quashed. The with held increments shall be released forthwith

ಆದುದರಿಂದ ಶ್ರೀ ಎಸ್.ಬಿ. ಹೊನ್ನೂರ್‌ರವರು ಕೆ.ಎ.ಟಿ.ಯಲ್ಲಿ ದಾಖಲಿಸಿರುವ ಅರ್ಜಿಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಇವರಿಗೆ ವಿಧಿಸಿದ ದಂಡನೆಯ ಆದೇಶವನ್ನು ರದ್ದುಗೊಳಿಸಿ ತಡೆಹಿಡಿದಿರುವ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಲು ನಿರ್ಣಯಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 128 ಎಸ್‌ಇಎನ್ 1998 (ಸಿಆಸುಇ) 287 ಕೆಇಬಿ 2007), ಬೆಂಗಳೂರು ದಿನಾಂಕ 17ನೇ ಡಿಸೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಹೊನ್ನೂರ್, ಅಂದಿನ ಸಹಾಯಕ ನಿರ್ದೇಶಕರು ನಗರ ಯೋಜನಾ ಇಲಾಖೆ ಹಾಲಿ ನಗರ ಯೋಜನಾ ಹೆಚ್ಚುವರಿ ನಿರ್ದೇಶಕರು, ಬಿ.ಎಂ.ಆರ್.ಡಿ.ಎ. ಬೆಂಗಳೂರು ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ದಿನಾಂಕ 13–05–1998ರ ಸರ್ಕಾರಿ ಆದೇಶ ಸಂ : ಸಿಆಸುಇ 106 ಎಸ್.ಇ.ಎನ್. 91 ರಲ್ಲಿ ಅವರ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆ ಹಿಡಿದು ವಿಧಿಸಲಾಗಿದ್ದ ದಂಡನೆಯನ್ನು ರದ್ದುಗೊಳಿಸಲಾಗಿದೆ. ಸದರಿಯವರ ವಿರುದ್ಧ ಈ ಪ್ರಕರಣದ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಹೆಚ್.ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಸೇವೆಗಳು–2)

ಪಿಆರ್ 36

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀಮತಿ ಎಂ. ಸಾವಿತ್ರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಘನ ಪಿ.ಸಿ.ಜೆ.ಎಂ. ಮತ್ತು ಎ.ಸಿ.ಜೆ.ಎಂ. ನ್ಯಾಯಾಲಯ, ಶಿವಮೊಗ್ಗ ಇವರ ಮೇಲಿನ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ:** 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)ಸಿಟಿಎಲ್–23/ಸಿಆರ್7/2009 ಶಿವಮೊಗ್ಗ ದಿನಾಂಕ : 18–11–2009.
2) ತನಿಖಾಧಿಕಾರಿಯ ವರದಿ 05–10–2009.
3) ತನಿಖಾ ದಾಖಲೆಗಳಾದ ಪಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಸಾಯನಿಕ ಪರಿವೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀಮತಿ ಎಂ. ಸಾವಿತ್ರಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಘನ ಪಿ.ಸಿ.ಜೆ.ಎಂ ಮತ್ತು ಎ.ಸಿ.ಜೆ.ಎಂ ನ್ಯಾಯಾಲಯ, ಶಿವಮೊಗ್ಗ ಇವರ ವಿರುದ್ಧ ಮೊಕದ್ದಮೆ ಸಂಖ್ಯೆ : 07/09 ಕಲಂ 7, 13(1)(ಡಿ) ರೆಡ್‌ವಿತ್ (13)(2)ರ ಲಂಚ ನಿರೋಧಕ ಕಾಯ್ದೆ 1988ರ ಅಡಿಯಲ್ಲಿ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಶಿವಮೊಗ್ಗ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ತನಿಖಾ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಉಲ್ಲೇಖ (2) ಮತ್ತು (3)ರೊಡನೆ ಅಪರ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ದಿನಾಂಕ 18–11–2009 (ಉಲ್ಲೇಖ 1) ರೊಡನೆ ಕಳುಹಿಸುತ್ತಾ ಅಪಾದಿತೆಯನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 19(1)(ಬಿ) ಕಲಂ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

order No. FD 25 TAR 2009 dated 23-11-2009 Government of Karnataka orders the attachment of the following immovable properties of VINIV-INC and other allied companies (as per the Annexure enclosed) acquired by them either in their own name or in the name of any other person.

Property No-1 :

**Schedule**

Converted land of yelahanka Village, Bangalore North Additional Taluk Bangalore District in Sy. Nos. 61/2 & 61/3 from No. 10 to 58 bearing Old Municipal Khatha No. 1724 to 1781 New Khatha No. 1138, 1139, 1140, 1141, 1142, 1143, 1144, 1145, 1146, 1147, 1148, 1149, 1150, 1151, 1152, 1153, 1154, 1155, 1156, 1157, 1158, 1159, 1160, 1161, 1162, 1163, 1164, 1165, 1166, 1167, 1168, 1169, 1170, 1171, 1172, 1173, 1174, 1175, 1176, 1177 1178, 1179, 1180, 1191, 1192, 1193, 1194, 1195, 1196 Total (Area) 64, 245.25 Sq.ft. (Total No. of Sites 49)

**Boundaries**

| | |
|---|---|
| East : | Road and Site 9 (1 to 9) |
| West : | Raja Kaluve |
| North : | Road & Remaining Sites of Seller |
| South : | Motappas Property |

Property No-2 :

| | | |
|---|---|---|
| District: Bangalore Rural | Taluk Hosakote Sulibele hobli | Village: Ekarajapura |

26 acres of converted land in Survey No. 32/P2 as detailed below

| Sl.No. | Name of the Khatha Holder | Name of the Purchaser | Survey No. | Area Acres-Guntas | Sale Deed No. |
|---|---|---|---|---|---|
| 1 | Narayanappa S/o. Lakshmaiah | K.N. Srinivasa Shastri | 32/P2 | 7-10 | 5746/04-05 |
| 2 | Kallappa | K.N. Srinivasa Shastri | 32/P2 | 1-20 | 4917/04-05 |
| 3 | Kenchappa | K.N. Srinivasa Shastri | 32/P2 | 2-00 | 4914/04-05 |
| 4 | Mallappa | K.N. Srinivasa Shastri | 32/P2 | 2-26 | 4952/04-05 |
| 5 | Ramaiah | K.N. Srinivasa Shastri | 32/P2 | 2-26 | 4916/04-05 |
| 6 | Chikka kallappa | K.N. Srinivasa Shastri | 32/P2 | 2-26 | 4933/04-05 |
| 7 | Muniraju S/o Chikkamuniyappa | K.N. Srinivasa Shastri | 32/P2 | 2-21 | 4925/04-05 |
| 8 | Muniyappa | K.N. Srinivasa Shastri | 32/P2 | 2-05 | 4925/04-05 |
| 9 | Venkateshappa S/o Late Doddamuniyappa | K.N. Srinivasa Shastri | 32/P2 | 2-26 | 4915/04-05 |
| | **Total** | | | **26-00** | |

By order and in the name of the Governor of Karnataka,

**C. Shamarao**

Under Secretary to Government

Finance Department (FR & BCC)

PR. 88

## ANNEXURE

List of VINIV-INC and other allied Companies.

1) VINIV-INC

2) VINIV-INC Foundation

3) VINIV-INC Ultra Super Market

4) VINIV-INC Properties

5) VINIV-INC Business Solutions Pvt. Ltd

6) VINIV-INC Education Trust

7) VINIV-INC Help Mart Pvt. Ltd.

8) VINIV-INC Info Solutions Pvt. Ltd.

9 ) VINIV-INC Times

10) VINIV-INC Matrimony

11) VINIV-INC News Net

12) VINIV-INC Souharda Credit Co-op. Society Ltd.

13) VINIV-INC Insurance Solution

14) VIKAS BUILDERS

**ಸಹಕಾರ ಸಚಿವಾಲಯ**

**ವಿಷಯ :** ದಿನಾಂಕ 31–03–2010 ರೊಳಗೆ ನಡೆಸಬೇಕಾಗಿರುವ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ. ಬೆಳಗಾವಿ ಇದರ ಆಡಳಿತ ಸಮಿತಿಯ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:** ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಬೆಳಗಾವಿ ಇದರ ಅಧ್ಯಕ್ಷರ ಪತ್ತ ಸಂಖ್ಯೆ: ಎಂ.ಸಿ.ಎಸ್‌ಎಂ/ಬಿಒಡಿ/2009–10/106, ದಿನಾಂಕ 16–11–2009 ಮತ್ತು 10–12–2009.

**ಪ್ರಸ್ತಾವನೆ :**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ (2)ರಡಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ. ಬೆಳಗಾವಿ ಇದು ಮಾರ್ಚ್ 2010ರಲ್ಲಿ ತನ್ನ ಆಡಳಿತ ಸಮಿತಿಗೆ ಚುನಾವಣೆಯನ್ನು ನಡೆಸಬೇಕಾಗಿದ್ದು ಸದರಿ ಕಾರ್ಖಾನೆಯ ಅಧ್ಯಕ್ಷರು ಮೇಲೆ ಓದಲಾದ ಪತ್ರದಲ್ಲಿ ಅವರ ಕಾರ್ಖಾನೆಯ ಕಾರ್ಯಕ್ಷೇತ್ರವು ನೆರೆ ಹಾವಳಿಯಿಂದಾಗಿ ಸಂಕಷ್ಟಕ್ಕೆ ಒಳಗಾಗಿರುವುದರಿಂದ ಅವರ ಕಾರ್ಖಾನೆಯ ರಸ್ತೆ ಮತ್ತಿತರ ಕಾಮಗಾರಿಗಳು ಹಾಳಾಗಿದ್ದರಿಂದ ಮತ್ತು ಅವರ ಆಡಳಿತ ಮಂಡಳಿಯವರು ಸಹ ನೆರೆ ಸಂತ್ರಸ್ಯರ ನೆರವಿಗೆ ಬರುತ್ತಿರುವುದರಿಂದ ವಾರ್ಷಿಕ ಮಹಾಸಭೆಯನ್ನು ಮುಂದೂಡಲಾಗಿದ್ದು ಅವರ ಪ್ರಾಜೆಕ್ಟಿನ ಸಿವಿಲ್ ಕಾಮಗಾರಿಗಳು ಮುಗಿದಿದ್ದರೂ ಸಹ ಕಾರ್ಖಾನೆಯ ಕಮೀಷನಿಂಗ್ ಸ್ಥಗಿತಗೊಂಡಿರುವುದರಿಂದ ಮಾರ್ಚ್ 2010ರಲ್ಲಿ ನಡೆಯಬೇಕಿರುವ ಆಡಳಿತ ಸಮಿತಿಯ ಚುನಾವಣೆಯನ್ನು ಒಂದು ವರ್ಷ ಕಾಲ ಮುಂದೂಡಬೇಕೇಂದು ಕೋರಿದ್ದಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 213 ಸಿಎಲ್‌ಎಂ 2009, ಬೆಂಗಳೂರು, ದಿನಾಂಕ: 4ನೇ ಜನವರಿ 2010.**

ಮೇಲಿನ ಪರಿಸ್ಥಿತಿಯಲ್ಲಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಬೆಳಗಾವಿ ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸರ್ಕಾರವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಃ(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಸದರಿ ಸಹಕಾರ ಸಂಘದ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ 30–09–2010ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ:** ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30–09–2010ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ

ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟುಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.89

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## LAW, JUSTICE & HUMAN RIGHTS SECRETARIAT

**Sub :** Establishment of two more courts of Additional City Civil & Sessions Judges (Special Courts) for trial of CBI Cases at Bangalore

**Read :** 1. Letter dated 24-7-2009 from the Hon'ble Prime Minister addressed to the Hon'ble Chief Minister of Karnataka

(2) Letter No. GOB II 281/2009 dated 30-10-2009.

**Preamble :**

Hon'ble Prime Minister of India in his letter dated 24-7-2009 addressed to the Hon'ble Chief Minister of Karnataka has informed that in view of pendency of large number of CBI Cases awaiting trial and also as per the recommendation by the Chief Justice of India, it has been decided to establish 71 Addl. Special Courts at various places in the country. Two of these courts will be at Bangalore. The expenditure on account of the said two Courts at Bangalore will have to be met initially the State Government and the same is fully re-imbursible by the Union Government subsequently. In response to the Hon'ble Prime Minister letter, Government of Karnataka have conveyed their concurrence to establish the said two addl. Special Courts at Bangalore. Further, the Registrar General, Hon'ble High Court of Karnataka in his letter read at Sl.No. 2 above, has sent proposal to Government along with staffing pattern and statements of recurring and non-recurring charges.

The proposal has been examined by the Government in detail and hence the Orders as under.

### Government Order No. LAW 189 LCE 2009, Bangalore, Dated 1st January 2010

After careful consideration of all the aspects, Government are pleased to accord approval to establish two Courts of Additional City & Sessions Judges (Special Courts) for trial of CBI cases at Bangalore, together with the post of Presiding Officer and the following non-gazetted staff :

| Sl.No. | Name of the Post | Number of Posts | |
|---|---|---|---|
| | | For One Court | For Two Courts |
| 1 | Addl. City Civil and Sessions Judge | 1 | 2 |
| 2 | Judgement Writers | 2 | 4 |
| 3 | Sheristedars | 2 | 4 |
| 4 | F.D.A.s | 2 | 4 |
| 5 | S.D.A.s | 2 | 4 |
| 6 | Typist | 1 | 2 |
| 7 | Attender | 1 | 2 |
| 8 | Peon | 2 | 4 |
| | **Total** | **13** | **26** |

Government hereby accord approval to incur recurring and non-recurring expenditure in this behalf under the Head of Account "2014-Administration of Justice-00-105 Civil & Sessions Courts -0-00-105 Civil & Sessions Courts-0-03-Special Courts for trial of CBI Cases.

Sanction of Government is also accorded for purchase of Stationery articles, furniture, typewriters, Xerox machine, stationery, computer, fax machine etc. for the use of the said Courts.

The Director, Printing Stationery and Publications Department, Bangalore is hereby directed to supply requisite quota of stationery articles, forms, seals, Registers and Karnataka Gazette, for the use of the said two Special Courts.

This Order issues with the concurrence of Finance Department vide their Note No. FD 572 Exp. 10/2009 dated 24-12-2009.

By order and in the name of the Governor of Karnataka,

**E. Shivananda**

Under Secretary to Government (Adm.1)

Law, Justice & Human Rights Dept.

PR. 90

**ಇಂಧನ ಸಚಿವಾಲಯ**

**ವಿಷಯ :** ಮೆ॥ ಪಿನೆಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಂಚಿಕೆ ಮಾಡಲಾಗಿರುವ 13.00 ಮೆಗಾ ವ್ಯಾಟ್ ಸಾಮರ್ಥ್ಯದ ದೇವರಬೆಟ್ಟ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ : ಇಂಇ 267 ಎನ್‌ಸಿಇ 2003, ದಿನಾಂಕ 15–11–2003
2) ಸರ್ಕಾರಿ ಆದೇಶ ಸಂಖ್ಯೆ : ಇಂಇ 147 ಎನ್‌ಸಿಇ 2004, ದಿನಾಂಕ 20–5–2004
3) ಸರ್ಕಾರಿ ಆದೇಶ ಸಂಖ್ಯೆ : ಇಂಇ 61 ಎನ್‌ಸಿಇ 2006, ದಿನಾಂಕ 2–2–2006
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ/06/ದೇವರಬೆಟ್ಟ/2009/1706, ದಿನಾಂಕ : 5/18–5–2009

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಪಿನೆಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ದೇವರಬೆಟ್ಟ ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಸದರಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನ 2.00 ಮೆಗಾ ವ್ಯಾಟ್ ನಿಂದ 13.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ 2–2–2006 ರಿಂದ ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಮೆ॥ ಪಿನೆಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರು ಅರಣ್ಯ ಇಲಾಖೆಯಿಂದ ಯೋಜನೆಯ ಅನುಷ್ಠಾನಕ್ಕೆ ಬೇಕಾದ ಜಮೀನನ್ನು ದೊರಕಿಸಿಕೊಳ್ಳುವುದು ತಡವಾಗಿರುತ್ತದೆ ಹಾಗೂ ಇದರಿಂದ ಯೋಜನೆಗೆ ತಾಂತ್ರಿಕ ಅನುಮೋದನೆ ದೊರಕದೇ ಇರುವುದರಿಂದ ಯೋಜನೆಯ ಅನುಷ್ಠಾನದ ಕಾಲಾವಧಿಯ ದಿನಾಂಕ : 1–2–2009ಕ್ಕೆ ಮುಗಿದಿರುವುದರಿಂದ ಯೋಜನೆಯ ಅನುಷ್ಠಾನದ ಕಾಲಾವಧಿಯನ್ನು ಇನ್ನೂ 3 ವರ್ಷಗಳವರೆಗೆ ವಿಸ್ತರಿಸುವಂತೆ ಅಭಿವೃದ್ಧಿದಾರರು ಕೋರಿರುತ್ತಾರೆಂದು ತಿಳಿಸುರುತ್ತಾರೆ. ಮುಂದುವರೆದು ಪ್ರಸ್ತುತ ಯೋಜನೆಯು ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನಲ್ಲಿ ಬರುತ್ತಿರುವ ಕೆ.ಪಿ.ಸಿ.ಎಲ್. ನವರ Gundia High Head (2x200 MW) ಯೋಜನೆಯ ಕೇರಿಹೊಳೆ ಒಡ್ಡಿನೊಂದಿಗೆ overlap ಆಗುತ್ತದೆ ಎಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯ ಬಗ್ಗೆ ದಿನಾಂಕ 24–1–2009 ರಂದು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ನಿರ್ಣಯವಾಗಿರುತ್ತದೆ :–

"This is coming within the Gundia High Head Scheme of KPCL and will be submerged. There are no valid grounds for extension. The allotment may be cancelled."

ಅದರಂತೆ ಈ ಕೆಳಕಂಡ ಆದೇಶ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 351 ಎನ್‌ಸಿಇ 2009, ಬೆಂಗಳೂರು, ದಿನಾಂಕ : 30–12–2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶಗಳ ಸಂಖ್ಯೆ : ಡಿಇ 267 ಎನ್‌ಸಿಇ 2003 ದಿನಾಂಕ : 15–11–2003 ಹಾಗೂ ಆದೇಶ ಸಂಖ್ಯೆ : ಇಂಇ 147 ಎನ್‌ಸಿಇ 2004 ದಿನಾಂಕ : 20–5–2004ರಲ್ಲಿ ಮೆ॥ ಪಿನೆಕಲ್ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ದೇವರಬೆಟ್ಟ ಹೊಳೆಗೆ ಅಡ್ಡಲಾಗಿ ಹಂಚಿಕೆಯಾಗಿದ್ದ 13.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆಗೆ ಸಂಬಂಧಿಸಿದ ಆದೇಶದ ಹಾಗೂ ಈ ಸಂಬಂಧ ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 95

**ಎಸ್. ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ತುಮಕೂರು ಜಿಲ್ಲೆ, ಮಧುಗಿರಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆಗೆ ಅಚಿತಿಮ ಅನುಮೋದನೆ ನೀಡಿರುವ ಆದೇಶದ ಬಗ್ಗೆ – ತಿದ್ದುಪಡಿ ಕುರಿತು.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ : ನಅಇ 26 ಬೆಂರೂಪ್ರಾ 2001, ದಿನಾಂಕ 20–3–2001

2) ಸರ್ಕಾರಿ ಆದೇಶ ಸಂಖ್ಯೆ : ನಅಇ 32 ಬೆಂರೂಪ್ರಾ 2006, ದಿನಾಂಕ 10–4–2006

3) ಮುಖ್ಯಾಧಿಕಾರಿಗಳು, ಪುರಸಭೆ, ಮುಧುಗಿರಿ ಇವರ ಪತ್ರ ಸಂಖ್ಯೆ : ಪು/ಸ್ಥ.ಯೋ/ಪ್ರಾ/ಮ/ಭೂಪ/ 01/08–09/17, ದಿನಾಂಕ 27–1–2009.

4) ನಗರ ಮತ್ತು ಗ್ರಾಮಾಂತರ ಯೋಜನಾ ನಿದೇಶಕರ ಪತ್ರದ ಸಂಖ್ಯೆ : ನಯೋ (21)ಜಂ.ನಿ./ಬೆಂ.ವಿ/ವ.ನೊ./30/08–09, ದಿನಾಂಕ : 16–3–2009.

**ಪ್ರಸ್ತಾವನೆ :**

ಮೇಲೆ (1) ರ ಆದೇಶದಲ್ಲಿ ಸರ್ಕಾರವು ಮಧುಗಿರಿ ಪುರಸಭೆಯನ್ನು ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಿರುತ್ತದೆ ಹಾಗೂ (2)ರ ಆದೇಶದಲ್ಲಿ ಮಧುಗಿರಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3) ರನ್ವಯ ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯಾಧಿಕಾರಿಗಳು, ಪುರಸಭೆ, ಮಧುಗಿರಿ ಇವರು ತುಮಕೂರು ಜಿಲ್ಲೆ, ಮಧುಗಿರಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾ ಯೋಜನೆಯಲ್ಲಿ ಬಿಜವಾರ ಗ್ರಾಮದ ಸ.ನಂ. 101ರ ಜಮೀನು ಬಿಜವಾರು ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರಿದ್ದು, ಮಧುಗಿರಿ ಪುರಸಭೆ ವ್ಯಾಪ್ತಿಗೆ ಒಳಪಡುವುದಿಲ್ಲವೆಂದು, ಪುರಸಭೆಗಡಿಯ ಅಧಿಸೂಚನೆಯ ಅನುಬಂಧ–ಬಿ ರಲ್ಲಿಯ ಉತ್ತರ ಗಡಿಯ ವಿವರಣೆನ್ವಯ ಸದರಿ ಬಿಜವಾರ ಗ್ರಾಮದ ಸ.ನಂ. 101ನ್ನು ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಯಿಂದ ಹೊರತುಪಡಿಸಬೇಕಾಗಿರುವುದಾಗಿ ಪ್ರಸ್ತಾವನೆಯನ್ನು ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರಿಗೆ ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶರಕರು ಮುಖ್ಯಾಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಿ, ಅಂತಿಮ ಅನುಮೋದನೆಯಾಗಿರುವ ಮಧುಗಿರಿ ಪಟ್ಟಣದ ಮಹಾ ಯೋಜನೆಯಲ್ಲಿ ಸದರಿ ಸ.ನಂ. 101ನ್ನು ಕೈಗಾರಿಕಾ ಉಪಯೋಗಕ್ಕೆ ಕಾಯ್ದಿರಿಸಿದ್ದು, ಈ ಜಮೀನು ಬಿಜವಾರು ಗ್ರಾಮ ಪಂಚಾಯಿತಿಗೆ ಒಳಪಡುವುದರಿಂದ ಸ್ಥಳೀಯ ಯೋಜನಾ ಪ್ರದೇಶದಿಂದ ಕೈಬಿಡುವ ಬಗ್ಗೆ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 112 ಬೆಂರೂಪ್ರಾ 2006, ಬೆಂಗಳೂರು, ದಿನಾಂಕ : 1–1–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳಗೆ ಒಳಪಟ್ಟು ಮಧುಗಿರಿ ಸ್ಥಳಿಯ ಯೋಜನಾ ಪ್ರದೇಶಕ್ಕೆ ಅಂತಿಮ ಅನುಮೋದನೆಯಾಗಿರುವ ಮಹಾ ಯೋಜನೆಯಲ್ಲಿ ಒಳಗೊಂಡಿರುವ ಬಿಜವಾರ ಗ್ರಾಮದ ಸ.ನಂ. 101ನ್ನು ಸ್ಥಳೀಯ

ಯೋಜನಾ ಪ್ರದೇಶದ ವ್ಯಾಪ್ತಿಯಿಂದ ಹೊರತುಪಡಿಸಿದೆ ಹಾಗೂ ಸದರಿ ಜಮೀನಿಗೆ ಮಹಾ ಯೋಜನೆಯಲ್ಲಿ ಕಾಯ್ದಿರಿಸಲಾಗಿದ್ದ ಕೈಗಾರಿಕಾ ಉಪಯೋಗದ ಭೂ ಬಳಕೆಯನ್ನು ಸಹಾ ರದ್ದುಪಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 96

**ಸಿ. ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

ಸಂಖ್ಯೆ : ಪಸಂಮೀ 271 ಪಅಸೇ 2009, ಬೆಂಗಳೂರು. ದಿನಾಂಕ 30ನೇ ಡಿಸೆಂಬರ್ 2009

### ಸೇರ್ಪಡೆ

ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ 80 ಪಅಸೇ 2005, ದಿನಾಂಕ : 13–06–2005ರ ಅನುಬಂಧ–II ರಲ್ಲಿ ಇಲಾಖಾ ನಿರ್ದೇಶಕರಿಗೆ ಪ್ರತ್ಯಾಯೋಜಿಸಿರುವ ಆಡಳಿತಾತ್ಮಕ ಅಧಿಕಾರಿಗಳ ಮುಂದುವರಿಕೆಯಾಗಿ ಕ್ರಮ ಸಂಖ್ಯೆ (5)ರ ನಂತರ ಈ ಕೆಳಕಂಡ ಆಡಳಿತಾತ್ಮಕ ಅಧಿಕಾರವನ್ನು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

"(6) ಇಲಾಖೆಯ ಅಪರ/ಜಂಟಿ ನಿರ್ದೇಶಕರುಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಅಧಿಕಾರಿ/ಸಿಬ್ಬಂದಿಗಳ ವಾರ್ಷಿಕ ವೇತನ ಬಡ್ತಿ, ಸಮಯಾವಧಿ ವೇತನ ಶ್ರೇಣಿ, ಸ್ವಯಂಚಾಲಿತ ವೇತನ ಶ್ರೇಣಿ, ವೈದ್ಯಕೀಯ ಮರುಪಾವತಿ, ಸಾಮಾನ್ಯ ಭವಿಷ್ಯ ನಿಧಿ ಮುಂಗಡ ಇವುಗಳಿಗೆ ಮಂಜೂರಾತಿ ನೀಡುವ ಕೆಲಸವನ್ನೂ ಸಹ ನಿರ್ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ. ಆರ್. 97

ಬಿ. ಕೆ. ಶ್ರೀನಿವಾಸಮೂರ್ತಿ

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶು ಸಂಗೋಪನೆ)

## ENERGY SECRETARIAT

**Sub :** Tax concessions to all Independent Power Projects under Entry Tax, Stamp duty & Registration charges.

**Read: Govt. Order No. CI/233/SPI/2008, dated 28.02.2009.**

**Preamble:**

The New Industrial Policy 2009-14 provides for exemptions & concessions to New Industries set up in the State of Karnataka depending on the zones in which the same are set up.

However the power projects are not covered for such concessions in the said policy. The Government having extended such concessions to power projects of the IPP's under "New Industrial Policy 2006-11 with a separate order vide G.O. No.: DE23 PPC 97, Bangalore dated 30.06.2007, to promote the power projects in the State of Karnataka to harness the available potential to add to the Electricity resources, the same needs to be further promoted for the projects covered under the New Industrial Policy 2009-14 as well.

The intentions of the Government was to extend the concessions, so that the Regulator takes into account such concessions to bring down the purchase cost by the ESCOMs, which in turn brings down the consumer's tariff.

The relevant clause in the New Industrial Policy 2009-14 with regard to exemption from entry tax, stamp duty & concessional Registration charges are as under :-

| | |
|---|---|
| 1. Exemption from Entry tax | MSME, Large & Mega Projects :-<br>100% exemption from payment of ET on 'Plant & Machinery and Capital Goods' for an initial period of 3 years from the date of commencement of project implementation. For this |

| | |
|---|---|
| | purpose, the term 'Plant & Machinery and Capital Goods' also includes plant & machinery, equipment etc. including machineries for captive generation of Electricity.<br>On raw, materials, inputs, component parts & consumables(excluding petroleum products) {wherever applicable} for a period of 5 years from the date of commencement of commercial production<br>In Zone 1,2 & 3<br>Zone – 4: Nil. |
| 2. Exemption from stamp duty | MSME, Large & Mega Projects :-<br>Stamp duty to be paid in respect of (i) loan agreements, credit deeds, mortgage and hypothecation deeds executed for availing term loans from State Government & or State Financial Development Corporation, Industrial Investment Development Corporation, National Level Financial Institutions, Commercial Banks, RRBs, Co operative Banks, KVIB/KVIC,-Karnataka State SC/ST Development Corporation, Karnataka State Minority Development Corporation and other institutions which may be notified by the Government from time to time for the initial period of five years only and (ii) for lease deeds, lease-cum-sale and absolute sale deeds executed by industrial enterprises in respect of industrial plots, sheds, industrial tenements, by KIADB, KSSIDC, KEONICS, KSIIDC, Industrial Co-operatives and approved private industrial estates shall be exempted as below :<br>Zone 1&2 : 100%<br>Zone 3 : 75%<br>Zone 4 : Nil |
| 3. Concessional Registration charges | MSME, Large & Mega Projects :-<br>For all loan document & sale deeds as specified under exemption from stamp duty under New Industrial Policy 2009-14, registration charges shall be at a concessional rate of Rs. 1000. |

**Note :**

(i) The exemption of Stamp duty and concessional registration charges are also applicable to lands purchased under section 109 of the KLR Act and also for direct purchase of industrially converted lands for the projects approved by SHLCC/SLSWCC/DLSWCC. This incentive will also be applicable for the land transferred by KIADB to land owners as compensation for the acquired land.

(ii) The exemption of Stamp duty and concessional registration charges are also available for registration of final sale deed in respect of lands, sheds, plots, industrial tenements after the expiry of lease period at the rate as specified in the industrial policy which was in vogue at the time of execution of lease-cum-sale deed.

The matter has been examined at Government level.

Hence the order.

**Government Order No. EN 95 EBS 2009 Bangalore, Dated 29th December 2009**

Government is pleased to accord approval for extending the tax concessions in respect of Entry Tax, Stamp Duty & Registration charges which are available under the New Industrial Policy 2009-14 to all the New Power Projects of the IPP.

This order issues with the concurrence of the Finance Department vide U.O. Note FD 5 CET 2009 dated 01-09-2009.

By Order and in the name of the Governor of Karnataka,

**(Sujathamma)**

Desk Officer,

Energy Department.

PR. 47

**ಇಂಧನ ಸಚಿವಾಲಯ**

**ವಿಷಯ :** ವಿದ್ಯುತ್ ಪರಿವೀಕ್ಷಣಾ ಇಲಾಖೆಯ ಮುಖ್ಯ ವಿದ್ಯುತ್ ಪರಿವೀಕ್ಷಕರು ಹಾಗೂ 7 ಅಧಿಕಾರಿ/ನೌಕರರ ವಿರುದ್ಧ ಮಾಡಿರುವ ಆಪಾದನೆಗಳನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 132 ಇಬಿಎಸ್ 98 ದಿನಾಂಕ : 31.12.1998.
2. ಲೋಕಾಯುಕ್ತರವರ ಪತ್ರ ಸಂಖ್ಯೆ : Compt/Lok/BCD-124/1999/ARE-4 ದಿನಾಂಕ : 26.06.2007.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 69 ಇಬಿಎಸ್ 2007 ದಿನಾಂಕ : 01.12.2007.
4. ಅಪರ ನಿಂಬಂಧಕರು ವಿಚಾರಣೆ–4 ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ವಿಚಾರಣಾ ವರದಿ ಸಂಖ್ಯೆ : Lok/ARE-4/14-A/ENQ-4/2008 ದಿನಾಂಕ : 31.10.2009.
5. ಕರ್ನಾಟಕ ಲೋಕಾಯುಕ್ತರ ಅರೆ ಸರ್ಕಾರಿ ಪತ್ರ ಸಂಖ್ಯೆ : Lok/ARE-4 /ENQ-4/2008 ದಿನಾಂಕ : 25.11.2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ದಿನಾಂಕ :21.12.1998 ರಿಂದ 26.12.1998 ರವರೆಗೆ (6 ದಿನಗಳು) ವಿದ್ಯುಚ್ಛಕ್ತಿ ಸುರಕ್ಷತಾ ಸಪ್ತಾಹವನ್ನು ಆಚರಿಸಲು ರೂ. 2.50 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು. ಈ ಸಂಬಂಧ ಶ್ರೀ ಕೆ. ಶ್ರೀಹರಿ, ಎಂಬುವವರು ದಿನಾಂಕ : 29.01.2000 ಸಾಲಿನಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಕರು ಹಾಗೂ ಇತರೆ 8 ಅಧಿಕಾರಿಗಳು/ಸಿಬ್ಬಂದಿ ವರ್ಗದವರು ರೂ. 20.00 ಲಕ್ಷಗಳನ್ನು ದುರುಪಯೋಗ ಪಡಿಸಿಕೊಂಡಿರುವುದಾಗಿ ಕರ್ನಾಟಕ ಲೋಕಾಯುಕ್ತರಿಗೆ ದೂರು ಸಲ್ಲಿಸಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಮಾನ್ಯ ಲೋಕಾಯುಕ್ತ ಬೆಂಗಳೂರು ಇವರು ಕರ್ನಾಟಕ ಲೋಕಾಯುಕ್ತ ಕಾಯ್ದೆಯ ಕಲಂ 12(3) ರನ್ವಯ ವರದಿಯನ್ನು ಸಲ್ಲಿಸುತ್ತಾ, ಪ್ರತಿವಾದಿ 2–9 ಇವರ ವಿರುದ್ಧ ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳಲು ಶಿಫಾರಸ್ಸು ಮಾಡಿ ಪ್ರಕರಣವನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14 ಎ ರಡಿಯಲ್ಲಿ ಲೋಕಾಯುಕ್ತಕ್ಕೆ ಪ್ರಕರಣವನ್ನು ವಹಿಸಿಕೊಡುವಂತೆ ಸರ್ಕಾರದ ಆದೇಶವನ್ನು ಕೋರಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14 ಎ ಅಡಿಯಲ್ಲಿ ಲೋಕಾಯುಕ್ತರಿಗೆ ಪ್ರಕರಣವನ್ನು ವಹಿಸಿಕೊಡಲಾಗಿತ್ತು :–

(1) ಶ್ರೀ ಡಿ.ಹೆಚ್. ಬಸವರಾಜು, ವಿದ್ಯುತ್ ಪರಿವೀಕ್ಷಕರು

(2) ಶ್ರೀ ಎಂ. ಎಸ್. ಬಸವರಾಜು, ವಿದ್ಯುತ್ ಪರಿವೀಕ್ಷಕರು

(3) ಶ್ರೀ ಆಂಜನಪ್ಪ, ಉಪ ವಿದ್ಯುತ್ ಪರಿವೀಕ್ಷಕರು, ಕೇಂದ್ರ ಕಛೇರಿ

(4) ಶ್ರೀ ಕೆ.ಬಿ. ಶಶಿರಾಜ್, ಉಪ ವಿದ್ಯುತ್ ಪರಿವೀಕ್ಷಕರು, ಕೇಂದ್ರ ಕಛೇರಿ

(5) ಶ್ರೀ ವೈ. ವೆಂಕಪ್ಪ ಮೂಲ್ಯ, ಸಹಾಯಕ ಲೆಕ್ಕಾಧಿಕಾರಿ (ಆಡಳಿತ)

(6) ಶ್ರೀ ಕೆ. ಎಂ. ಸುಬ್ಬಕ್ಕಿ, ಪ್ರಥಮ ದರ್ಜೆ ಸಹಾಯಕರು, ಕೇಂದ್ರ ಕಛೇರಿ

(7) ಶ್ರೀ ಬಿ. ಪಿ. ನಾಗರಾಜು, ಉಪ ವಿದ್ಯುತ್ ಪರಿವೀಕ್ಷಕರು, ಮತ್ತು

(8) ಶ್ರೀ ಎ. ಜೆ. ಕಾಂತರಾಜ, ಉಪ ವಿದ್ಯುತ್ ಪರಿವೀಕ್ಷಕರು

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಅಪರ ನಿಂಬಂಧಕರು ವಿವಾರಣೆ 4 ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ವಿಚಾರಣಾ ವರದಿಯಲ್ಲಿ ಆಪಾದಿತ ಸರ್ಕಾರಿ ನೌಕರ 1 ರಿಂದ 8 ಇವರ ವಿರುದ್ಧ ಹೊರಿಸಲಾದ ಆಪಾದನೆಗಳು ಸಾಬೀತಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (5)ರ ಅರೆ ಸರ್ಕಾರಿ ಪತ್ರದಲ್ಲಿ ಮಾನ್ಯ ಲೋಕಾಯುಕ್ತರು ಆಪಾದಿತ ಸರ್ಕಾರಿ ನೌಕರರ ವಿರುದ್ಧ ಹೊರಿಸಲಾದ ಆಪಾದನೆಗಳು ಸಾಬೀತಾಗಿರುವುದಿಲ್ಲ, ಮುಂದುವರೆದು ಇವರ ಮೇಲೆ ಹೊರಿಸಲಾದ ನಡವಳಿಯನ್ನು ಕೈಬಿಡುವಂತೆ ತಿಳಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 69 ಇಬಿಎಸ್ 2007, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಮುಖ್ಯ ವಿದ್ಯುತ್ ಪರಿವೀಕ್ಷಣಾಲಯದ ಕೆಳಕಂಡ ಅಧಿಕಾರಿಗಳು ಮತ್ತು ನೌಕರರ ವಿರುದ್ಧ ಹೊರಿಸಲಾದ ಆಪಾದನೆಗಳು ಸಾಬೀತಾಗದೆ ಇರುವುದರಿಂದ ಇವರ ವಿರುದ್ಧ ಮಾಡಲಾದ ಆಪಾದನೆಗಳನ್ನು ಕೈಬಿಡಲಾಗಿದೆ :–

(1) ಶ್ರೀ ಡಿ.ಹೆಚ್. ಬಸವರಾಜು, ವಿದ್ಯುತ್ ಪರಿವೀಕ್ಷಕರು

(2) ಶ್ರೀ ಎಂ. ಎಸ್. ಬಸವರಾಜು, ವಿದ್ಯುತ್ ಪರಿವೀಕ್ಷಕರು

(3) ಶ್ರೀ ಆಂಜನಪ್ಪ, ಉಪ ವಿದ್ಯುತ್ ಪರಿವೀಕ್ಷಕರು, ಕೇಂದ್ರ ಕಛೇರಿ

(4) ಶ್ರೀ ಕೆ. ಬಿ. ಶಶಿರಾಜ್, ಉಪ ವಿದ್ಯುತ್ ಪರಿವೀಕ್ಷಕರು, ಕೇಂದ್ರ ಕಛೇರಿ

(5) ಶ್ರೀ ವೈ. ವೆಂಕಪ್ಪ ಮೂಲ್ಯ, ಸಹಾಯಕ ಲೆಕ್ಕಾಧಿಕಾರಿ (ಆಡಳಿತ)

(6) ಶ್ರೀ ಕೆ. ಎಂ. ಸುಬ್ಬಕ್ಕಿ, ಪ್ರಥಮ ದರ್ಜೆ ಸಹಾಯಕರು, ಕೇಂದ್ರ ಕಛೇರಿ

(7) ಶ್ರೀ ಬಿ. ಪಿ. ನಾಗರಾಜು, ಉಪ ವಿದ್ಯುತ್ ಪರಿವೀಕ್ಷಕರು, ಮತ್ತು

(8) ಶ್ರೀ ಎ. ಜೆ. ಕಾಂತರಾಜ, ಉಪ ವಿದ್ಯುತ್ ಪರಿವೀಕ್ಷಕರು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 48

**(ಸುಜಾತಮ್ಮ)**

ಪೀಠಾಧಿಕಾರಿ, ಇಂಧನ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

ವಿಷಯ: ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣೆ ಯೋಜನೆಯಡಿ ರಚಿಸಲ್ಪಟ್ಟ ಕೆರೆ ಬಳಕೆದಾರರ ಸಂಘಗಳ ಕಾರ್ಯಚಟುವಟಿಕೆಗಳ ಮೇಲುಸ್ತುವಾರಿ ಹಾಗೂ ಮಾರ್ಗದರ್ಶನ ನೀಡಲು ತಾಲ್ಲೂಕು ಮಟ್ಟದ ಸಮನ್ವಯ ಸಮಿತಿಯನ್ನು ರಚಿಸುವ ಬಗ್ಗೆ ಆದೇಶ.

ಓದಲಾಗಿದೆ:
1) ಆದೇಶ ಸಂ : ಸನೀಇ 29 ಜೆಎಸ್‌ವೈ 2002 ದಿನಾಂಕ 27.03.2003
2) ಆದೇಶ ಸಂ : ಸನೀಇ 14 ಕೆಜಿದು 2006 (ಭಾಗ) ದಿನಾಂಕ 22.11.2007
3) ಆದೇಶ ಸಂ : ಸನೀಇ 04 ಜಸಂಯೋ 2008 ದಿನಾಂಕ 31.08.2009
4) ಪತ್ರ ಸಂಖ್ಯೆ ಜೆ.ಎಸ್.ವೈ.ಎಸ್/ಬೆಂ/ಪಿ.ಎಂ.ಜಿ/157/2009–10 ದಿನಾಂಕ : 25.11.2009

**ಪ್ರಸ್ತಾವನೆ:**

ಜಲಸಂವರ್ಧನೆ ಯೋಜನಾ ಸಂಘದ ಮೂಲಕ ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಸಮುದಾಯಾಧಾರಿತ ಕೆರೆ ನಿರ್ವಹಣೆ ಯೋಜನೆಯನ್ನು ರಾಜ್ಯದ 10 ಜಿಲ್ಲೆಗಳ 34 ತಾಲ್ಲೂಕುಗಳಲ್ಲಿ ಅನುಷ್ಠಾನಗೊಳಿಸಲು ಮೇಲೆ ಓದಲಾದ (1)ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ. ಅದರನ್ವಯ ಸದರಿ ಯೋಜನೆಯು ಪ್ರಥಮ ಹಂತದಲ್ಲಿ ರಾಜ್ಯದ 10 ಜಿಲ್ಲೆಗಳಾದ ಕೋಲಾರ, ಚಿಕ್ಕಬಳ್ಳಾಪುರ, ತುಮಕೂರು, ಚಿತ್ರದುರ್ಗ, ರಾಯಚೂರು, ಹಾವೇರಿ, ಬಾಗಲಕೋಟೆ, ಬೀದರ್, ಕೊಪ್ಪಳ ಹಾಗೂ ಬಳ್ಳಾರಿ ಜಿಲ್ಲೆಗಳಲ್ಲಿ 2002–03 ರಿಂದ 2007–08ರ ಅವಧಿಯಲ್ಲಿ 2005 ಕೆರೆಗಳನ್ನು ಅಭಿವೃದ್ಧಿಪಡಿಸಲು ಉದ್ದೇಶಿಸಲಾಗಿದೆ.

ಸದರಿ ಯೋಜನೆಯಡಿ ಎರಡನೇ ಹಂತದ ಮುಂದುವರಿದ ಯೋಜನೆಯಡಿ ವಿಶ್ವಬ್ಯಾಂಕಿನ ಹೆಚ್ಚುವರಿ ಆರ್ಥಿಕ ನೆರವಿನೊಂದಿಗೆ ರಾಜ್ಯದ ಬೆಳಗಾವಿ, ಬಿಜಾಪುರ, ಚಿಕ್ಕಮಗಳೂರು, ದಾವಣಗೆರೆ, ಧಾರವಾಡ, ಹಾಸನ, ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಲೆಗಳ 37 ತಾಲ್ಲೂಕುಗಳಲ್ಲಿ 1224 ಕೆರೆಗಳನ್ನು ರೂ. 306.98 ಕೋಟಿ ವೆಚ್ಚದಲ್ಲಿ ಪುನಶ್ಚೇತನಗೊಳಿಸಲು ಉಲ್ಲೇಖ(2)ರ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ. ತದ ನಂತರ ಉಲ್ಲೇಖ(3)ರ ಆದೇಶದಲ್ಲಿ ಮೊದಲ ಹಂತದ ಪ್ರಾಯೋಗಿಕ ಯೋಜನೆಯಡಿ ಉಳಿತಾಯವಾಗಿರುವ ಮೊತ್ತದಿಂದ ಮೊದಲ ಹಂತದ ಜಿಲ್ಲೆಗಳ 24 ತಾಲ್ಲೂಕುಗಳಲ್ಲಿ 694

ಕೆರೆಗಳನ್ನು ಅಭಿವೃದ್ಧಿಪಡಿಸಲು ಮಂಜೂರಾತಿ ನೀಡಲಾಗಿದೆ. ಹಾಗೂ ಮೊದಲ ಹಂತದ ಮತ್ತು ಮುಂದುವರೆದ ಯೋಜನೆಗಳ ಅನುಷ್ಠಾನಾವಧಿಯನ್ನು ದಿನಾಂಕ : 31.01.2012ರವರೆಗೆ ವಿಸ್ತರಿಸಲಾಗಿದೆ.

ಸದರಿ ಯೋಜನೆಯಡಿ ಸಮುದಾಯದ ಎಲ್ಲಾವರ್ಗದ ಪ್ರತಿನಿಧಿಗಳನ್ನೊಳಗೊಂಡ ಕೆರೆ ಸಂಘಗಳನ್ನು ರಚಿಸಿ ಅವುಗಳ ಮೂಲಕ ಯೋಜನಾ ವರದಿ ತಯಾರಿಸಿ ಹಾಗೂ ಅದರಂತೆ ಯೋಜನೆ ಅನುಷ್ಠಾನಗೊಳಿಸಿ ನಂತರ ಸಮುದಾಯಕ್ಕೆ ಹಸ್ತಾಂತರಿಸುವುದು ಸರ್ಕಾರದ ಉದ್ದೇಶವಾಗಿದೆ. ಈ ಯೋಜನೆಯಡಿ ಕೆರೆ ಅಭಿವೃದ್ಧಿ ಕಾಮಗಾರಿಗಳು, ಬೆಳೆ ಯೋಜನೆ, ನೀರು ನಿರ್ವಹಣೆ, ಅರಣ್ಯೀಕರಣ, ಮೀನುಗಾರಿಕೆ, ಕೃಷಿ ಉತ್ಪನ್ನ ಮಾರಾಟ, ಪಶು ಸಂಗೋಪನೆ, ಜೀವನಾಧಾರಿತ ಮತ್ತು ಆರ್ಥಿಕ ಬಲವರ್ಧನೆ ಚಟುವಟಿಕೆ ಮುಂತಾದವುಗಳ ಬಗ್ಗೆ ಕಾರ್ಯಕ್ರಮವನ್ನು ರೂಪಿಸಿ ಅದರಂತೆ ಅನುಷ್ಠಾನಗೊಳಿಸುವುದು ಕೆರೆ ಸಂಘಗಳ ಜವಾಬ್ದಾರಿಯಾಗಿರುತ್ತದೆ. ಈ ಸಂಘಗಳು ಸರ್ಕಾರದ ವಿವಿಧ ಯೋಜನೆಗಳನ್ನು ಗ್ರಾಮ ಮಟ್ಟದಲ್ಲಿ ಅನುಷ್ಠಾನಗೊಳಿಸಬೇಕಾಗಿದೆ. ಈ ಸಂಘಗಳಿಗೆ ಯೋಜನೆಯ ಅನುಷ್ಠಾನ ಅವಧಿಯಲ್ಲಿ ಹಾಗೂ ತದ ನಂತರ ಕೆರೆಗಳ ಕಾರ್ಯಕ್ಷಮತೆಯನ್ನು ಹೆಚ್ಚಿಸಿ ಹಾಗೂ ನಿರ್ವಹಣೆಯನ್ನು ಸಮರ್ಪಕವಾಗಿ ಮುಂದುವರಿಸಲು ಸಂಬಂಧಪಟ್ಟ ಇಲಾಖೆಗಳ ಮಾರ್ಗದರ್ಶನ ಅವಶ್ಯವಿರುತ್ತದೆ. ಈ ಹಿನ್ನೆಲೆಯಲ್ಲಿ ದಿನಾಂಕ : 24.07.2007ರಂದು ನಡೆದ ಜಲಸಂವರ್ಧನೆ ಯೋಜನಾ ಸಂಘದ 17ನೇ ಕಾರ್ಯಕಾರಿ ಸಮಿತಿ ಸಭೆಯಲ್ಲಿ ತಾಲ್ಲೂಕು ಮಟ್ಟದ ಸಮಿತಿಯನ್ನು ರಚಿಸುವ ಬಗ್ಗೆ ನಿರ್ಣಯಿಸಲಾಗಿದೆ. ಅದಲ್ಲದೆ, ದಿನಾಂಕ 27.08.2007 ರಂದು ಯೋಜನಾ ಜಿಲ್ಲೆಗಳ ಉಪ ವಿಭಾಗಾಧಿಕಾರಿಗಳು ಹಾಗೂ ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾ ಅಧಿಕಾರಿಗಳ ಸಭೆಯಲ್ಲಿ ತಾಲ್ಲೂಕು ಮಟ್ಟದ ಸಮನ್ವಯ ಸಮಿತಿಯನ್ನು ರಚಿಸುವುದು ಅವಶ್ಯವೆಂದು ಅಭಿಪ್ರಾಯ ಪಟ್ಟಿರುವ ಮೇರೆಗೆ ತಾಲ್ಲೂಕು ಮಟ್ಟದ ಸಮನ್ವಯ ಸಮಿತಿಯನ್ನು ರಚಿಸುವಂತೆ ಕಾರ್ಯನಿರ್ವಾಹಕ ನಿರ್ದೇಶಕರು, ಜಲಸಂವರ್ಧನೆ ಯೋಜನಾಸಂಘ ಇವರು ಮೇಲೆ ಓದಲಾದ (4)ರ ಪತ್ರದಲ್ಲಿ ಪ್ರಸ್ತಾಪಿಸಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 16 ಜಸಂಯೋ 2009, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಮುದಾಯ ಆಧಾರಿತ ಕೆರೆ ನಿರ್ವಹಣಾ ಯೋಜನೆಯಡಿರಚಿತವಾದ ಕೆರೆ ಬಳಕೆದಾರರ ಸಂಘಗಳಿಗೆ ಯೋಜನೆಯ ಅನುಷ್ಠಾನ ಅವಧಿಯಲ್ಲಿ ಹಾಗೂ ಮುಂದಿನ ಅವಧಿಗೆ ನಿರಂತರ ಉಸ್ತುವಾರಿ ಮತ್ತು ನಿರ್ವಹಣೆ ಸಂದರ್ಭದಲ್ಲಿ ಕಾಲಕಾಲಕ್ಕೆ ಸೂಕ್ತ ಮಾರ್ಗದರ್ಶನ ನೀಡಲು ಈ ಕೆಳಗಿನ ಅಧಿಕಾರಿಗಳನ್ನೊಳಗೊಂಡ ತಾಲ್ಲೂಕು ಮಟ್ಟದ ಸಮನ್ವಯ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರಚಿಸಲಾಗಿದೆ :

| | | | |
|---|---|---|---|
| 1. | ಸಂಬಂಧಪಟ್ಟ ತಾಲ್ಲೂಕು ಪಂಚಾಯತ್ ಕಾರ್ಯ ನಿರ್ವಹಣಾ ಅಧಿಕಾರಿ | – | ಅಧ್ಯಕ್ಷರು |
| 2. | ತಾಲ್ಲೂಕಿನ ತಹಶೀಲ್ದಾರರು | – | ಸದಸ್ಯರು |
| 3. | ಸಹಾಯಕ ಕಾರ್ಯಪಾಲಕ ಅಭಿಯಂತರರು, ಜಿಲ್ಲಾಪಂಚಾಯತ್, ಉಪವಿಭಾಗ | – | ಸದಸ್ಯರು |
| 4. | ಸಹಾಯಕ ನಿರ್ದೇಶಕರು, ಕೃಷಿ ಇಲಾಖೆ | – | ಸದಸ್ಯರು |
| 5. | ಸಹಾಯಕ ನಿರ್ದೇಶಕರು/ಸಹಾಯಕ ತೋಟಗಾರಿಕಾ ಅಧಿಕಾರಿ ತೋಟಗಾರಿಕಾ ಇಲಾಖೆ | – | ಸದಸ್ಯರು |
| 6. | ಸಹಾಯಕ ನಿರ್ದೇಶಕರು, ಮೀನುಗಾರಿಕೆ ಇಲಾಖೆ | – | ಸದಸ್ಯರು |
| 7. | ಸಹಾಯಕ ನಿರ್ದೇಶಕರು, ಪಶುಸಂಗೋಪನಾ ಮತ್ತು ಪಶುವೈದ್ಯ ಸೇವೆಗಳ ಇಲಾಖೆ | – | ಸದಸ್ಯರು |
| 8. | ವಲಯ ಅರಣ್ಯ ಅಧಿಕಾರಿ (ಸಾಮಾಜಿಕ ಅರಣ್ಯ) | – | ಸದಸ್ಯರು |
| 9. | ಸಮನ್ವಯ ಅಧಿಕಾರಿಗಳು, ಕೃಷಿ ವಿಜ್ಞಾನ ಕೇಂದ್ರ | – | ಸದಸ್ಯರು |
| 10. | ಜಿಲ್ಲಾ ಸಮನ್ವಯಾಧಿಕಾರಿಗಳು, ಕೃಷಿ ವಿಶ್ವ ವಿದ್ಯಾಲಯ, ಬೆಂಗಳೂರು ಮತ್ತು ಧಾರವಾಡ | – | ಸದಸ್ಯರು |
| 11. | ಕಾರ್ಯದರ್ಶಿಗಳು, ಕೃಷಿ ಉತ್ಪನ್ನ ಮಾರಾಟ ಸಮಿತಿ | – | ಸದಸ್ಯರು |
| 12. | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ | – | ಸದಸ್ಯರು |
| 13. | ಸಹಾಯಕ ಕಾರ್ಯಪಾಲಕ ಅಭಿಯಂತರರು, ಸಣ್ಣ ನೀರಾವರಿ, ಉಪವಿಭಾಗ | – | ಸದಸ್ಯ ಕಾರ್ಯದರ್ಶಿ |

ಸಮಿತಿಯು ಈ ಕೆಳಕಂಡವರನ್ನು ಈ ಸಂಸ್ಥೆಗಳು ಅಸ್ತಿತ್ವದಲ್ಲಿರುವವರೆಗೆ ವಿಶೇಷ ಪ್ರತಿನಿಧಿಗಳಾಗಿ ಆಹ್ವಾನಿಸುವುದು.

1. ಜಿಲ್ಲಾ ಯೋಜನಾ ಸಮನ್ವಯಾಧಿಕಾರಿ, ಜೆ.ಎಸ್.ವೈ.ಎಸ್.
2. ಸಮೂಹ ಮಾರ್ಗದರ್ಶನ ತಂಡದ ನಾಯಕರು
3. ಜೆ.ಎಸ್.ವೈ.ಎಸ್. ಜಿಲ್ಲಾ/ತಾಲ್ಲೂಕು ಕೆರೆ ಒಕ್ಕೂಟದ ಅಧ್ಯಕ್ಷರು ಅಥವಾ ಕಾರ್ಯದರ್ಶಿಗಳು

ಮೇಲ್ಕಂಡ ಸಮಿತಿಯ ಜವಾಬ್ದಾರಿಗಳು :

1. ತಿಂಗಳಿಗೊಮ್ಮೆ ನಿಗದಿತ ದಿನಾಂಕ ಮತ್ತು ಸಮಯದಲ್ಲಿ ಸಭೆ ನಡೆಸಿ ಕೆರೆ ಸಂಘಗಳ ಚಟುವಟಿಕೆಗಳ ಮೇಲುಸ್ತುವಾರಿ ನಡೆಸಿ ಸೂಕ್ತ ಮಾರ್ಗದರ್ಶನ ನೀಡುವುದು.
2. ಕೆರೆ ಸಂಘಗಳು ಮತ್ತು ಸಹ ಇಲಾಖೆಗಳಿಗೆ ಸಂಪರ್ಕ (linkages with line departments) ಕಲ್ಪಿಸಲು ಕಾರ್ಯನಿರ್ವಹಿಸುವುದು.

3. ವಿವಿಧ ಇಲಾಖೆಗಳಲ್ಲಿ ಗ್ರಾಮಾಂತರ ಪ್ರದೇಶಕ್ಕೆ ಅನ್ವಹಿಸುವಂತೆ ಆಯವ್ಯಯಗಳಲ್ಲಿ ಹಮ್ಮಿಕೊಳ್ಳಲಾಗುವ ವಿವಿಧ ಕಾರ್ಯಕ್ರಮಗಳನ್ನು ಕೆರೆಸಂಘಗಳ ಮೂಲಕ ಅನುಷ್ಠಾನಗೊಳಿಸಲು ಸಾಧ್ಯವಾಗುವಂತೆ ಸಕಾಲದಲ್ಲಿ ಸಂಪರ್ಕ ಕಲ್ಪಿಸುವುದು.
4. ಕೆರೆ ಬಳಕೆದಾರ ಸಂಘಗಳ ವಾರ್ಷಿಕ ಯೋಜನೆಯನ್ನು ಸೂಕ್ತವಾಗಿ ಕಾರ್ಯರೂಪಕ್ಕೆ ತರುವಲ್ಲಿ ಸಹಾಯಕವಾಗುವುದು.
5. ಕೆರೆ ಸಂಘಗಳ ಚಟುವಟಿಕೆಗಳಿಗೆ ಸಂಬಂಧಿಸಿದ ಪ್ರಗತಿ ವರದಿ, ಕೆರೆಗಳು ಹಾಗೂ ಅದರ ಬಳಕೆಗೆ ಸಂಬಂಧಿಸಿದ ಅಂಕಿ ಅಂಶಗಳು ಹಾಗೂ ಕೆರೆ ಸ್ಥಿತಿಗತಿ ಕುರಿತಂತೆ ಮಾಹಿತಿಯನ್ನು ಕಾಲಕಾಲಕ್ಕೆ ಸಂಬಂಧಪಟ್ಟ ಇಲಾಖೆ ಹಾಗೂ ಜಿಲ್ಲಾಧಿಕಾರಿಯವರಿಗೆ ಸಲ್ಲಿಸುವಂತೆ ಸಂಬಂಧಪಟ್ಟ ಕೆರೆ ಬಳಕೆದಾರರ ಸಂಘಗಳಿಗೆ ಮಾರ್ಗದರ್ಶನ ನೀಡುವುದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.49

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಶಿಕ್ಷಣ ಸಚಿವಾಲಯ**
**ತಿದ್ದುಪಡಿ ಆದೇಶ**

**ಪ್ರಸ್ತಾವನೆ :**

ಸರ್ಕಾರಿ ಆದೇಶ ಸಂಖ್ಯೆ : ಇಡಿ 178 ಟಿಪಿಇ 2009, ದಿನಾಂಕ : 01.08.2009ರ ಅನುಬಂಧದಲ್ಲಿನ ಕಂಡಿಕೆ (12-i) ಹಾಗೂ ಕಂಡಿಕೆ (12-ii) ನ್ನು ಈ ಕೆಳಕಂಡಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

| ಕಂಡಿಕೆ ಸಂಖ್ಯೆ | ವಿವರ | ತಿದ್ದುಪಡಿ ಮಾಡಲಾಗಿರುವುದು |
|---|---|---|
| 12-i | He/She pursued a course of study for not less than 3/3½ academic years & not more than 6/7 academic years | He/She pursued a course of study for not less than 3/3½ academic years & not more than 9/101/2 academic years |
| 12-ii | He/She has completed all the subjects. Students who fail to fulfill all the academic requirements for the award of the Diploma within 6/7 academic years from the year of admission shall forfeit their seat in the course & their seat shall stand cancelled | He/She has completed all the subjects Students who fail to fulfill all the academic requirements for the award of the Diploma within 9/10½ academic years from the year of admission shall forfeit their seat in the course & their seat shall stand cancelled |

ಪಿ.ಆರ್.50

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎನ್.ಆರ್. ಪ್ರಭು)**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

**ಶಿಕ್ಷಣ ಸಚಿವಾಲಯ**
**ತಿದ್ದುಪಡಿ ಆದೇಶ**

**ವಿಷಯ :**ಶ್ರೀ ಸಹ್ಯಾದ್ರಿ ವಿದ್ಯಾಸಂಸ್ಥೆ, ಚಿಗಟೇರಿ, ಹರಪನ ಹಳ್ಳಿ ಸಂಸ್ಥೆಯ ಸಮನ್ವಯ ಶಿಕ್ಷಣ ಯೋಜನೆ 2007–08 ನೇ ಸಾಲಿನ ಅನುದಾನವನ್ನು ದಾವಣಗೆರೆ ಜಿಲ್ಲೆಯ ಬದಲಿಗೆ ಬಳ್ಳಾರಿ ಜಿಲ್ಲೆಗೆ ಬಿಡುಗಡೆ ಮಾಡುವಂತೆ ಕೋರಿರುವ ಬಗ್ಗೆ.

**ಉಲ್ಲೇಖ:** 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 196 ಯೋಸಕ 2007, ದಿನಾಂಕ 30–5–2008.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 138 ಎಂಸಿಡಿ 2009, ದಿನಾಂಕ 23–9–2009.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಸರ್ಕಾರಿ ಆದೇಶಗಳ ಅನುಬಂಧದಲ್ಲಿ ಈ ಕೆಳಕಂಡಂತೆ ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು :–

| ಕ್ರಮ ಸಂಖ್ಯೆ | ಹಿಂದಿನ ಆದೇಶದಲ್ಲಿದ್ದ ವಿಳಾಸ | ಪ್ರಸ್ತುತ ಬದಲಾವಣೆ ಮಾಡಬೇಕಾದ ತಾಲ್ಲೂಕು ಹಾಗೂ ಜಿಲ್ಲೆ |
|---|---|---|
| 1. | ಶ್ರೀ ಸಹ್ಯಾದ್ರಿ ಎಜುಕೇಷನ್ ಸೊಸೈಟಿ, ಚಿಗಟೇರಿ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ | ಶ್ರೀ ಸಹ್ಯಾದ್ರಿ ಎಜುಕೇಷನ್ ಸೊಸೈಟಿ, ಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ |

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.51

**(ಐ. ಎಫ್. ಮಾಗಿ)**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ (ಯೋಜನೆ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** ಕೆ.ಆರ್. ಪೇಟೆಯ ಸರ್ಕಾರಿ ಪಾಲಿಟೆಕ್ನಿಕ್ ಸಂಸ್ಥೆಯ ಸುವರ್ಣ ಮಹೋತ್ಸವ ಆಚರಿಸುವ ಸಲುವಾಗಿ ರೂ. 10.00 ಲಕ್ಷ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ದಿನಾಂಕ : 8–7–2009 ರ ಪತ್ರ ಸಂಖ್ಯೆ : ಡಿಟಿಇ 13 ಬಿಎಲ್‌ಡಿ 2009.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕೆ.ಆರ್. ಪೇಟೆಯಲ್ಲಿರುವ ಸರ್ಕಾರಿ ಪಾಲಿಟೆಕ್ನಿಕ್ ಸಂಸ್ಥೆಯು 1960 ರಲ್ಲಿ ಸಿವಿಲ್, ಎಲೆಕ್ಟ್ರಿಕಲ್ ಮತ್ತು ಮೆಕ್ಯಾನಿಕಲ್ ಕೋರ್ಸುಗಳೊಂದಿಗೆ ಪ್ರಾರಂಭವಾಗಿದ್ದು, 1992–93 ರಲ್ಲಿ ಟೆಲಿಕಮ್ಯೂನಿಕೇಶನ್ ಮತ್ತು 1995–96 ರಲ್ಲಿ ಕಂಪ್ಯೂಟರ್ ಸೈನ್ಸ್ ಕೋರ್ಸ್‌ನ್ನು ಪ್ರಾರಂಭಿಸಿದ್ದು, ಫೆಬ್ರವರಿ 2010 ಕ್ಕೆ 50 ವರ್ಷ ಪೂರ್ಣವಾಗಿರುವುದರಿಂದ ಸುವರ್ಣ ಮಹೋತ್ಸವವನ್ನು ಆಚರಿಸಬೇಕಿರುವ ಹಿನ್ನೆಲೆಯಲ್ಲಿ ಸಂಸ್ಥೆಯ ಮುಖ್ಯ ಕಟ್ಟಡ/ಹಾಸ್ಟೆಲ್ ಕಟ್ಟಡಗಳ ದುರಸ್ಥಿ, ನವೀಕರಣ, ಡಾಂಬರೀಕರಣ, ಪೈಂಟಿಂಗ್ ಮತ್ತು ಇತರೆ ಕಾಮಗಾರಿಗಳ ಕಾರ್ಯವನ್ನು ಪ್ರಾರಂಭಿಸಬೇಕಾಗಿರುವುದರಿಂದ ರೂ. 1.00 ಕೋಟಿ ವಿಶೇಷ ಅನುದಾನವನ್ನು ಲೆಕ್ಕಶೀರ್ಷಿಕೆ "4202–02–104–1–01–139–ಯೋಜನೆಯಡಿಯಲ್ಲಿ ಬಿಡುಗಡೆಗೊಳಿಸುವಂತೆ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಇಡಿ 296 ಯೋಯೋಕ 2009, ಬೆಂಗಳೂರು ದಿನಾಂಕ 1–1–2010**

ಕೆ.ಆರ್. ಪೇಟೆಯ ಸರ್ಕಾರಿ ಪಾಲಿಟೆಕ್ನಿಕ್ ಸಂಸ್ಥೆಯ ಸುವರ್ಣ ಮಹೋತ್ಸವವನ್ನು 2010 ರ ಫೆಬ್ರವರಿ ಮಾಹೆಯಲ್ಲಿ ಆಚರಿಸುವ ಹಿನ್ನೆಲೆಯಲ್ಲಿ ಸಂಸ್ಥೆಯ ಮುಖ್ಯ ಕಟ್ಟಡ/ಹಾಸ್ಟೆಲ್ ಕಟ್ಟಡಗಳ ದುರಸ್ಥಿ, ನವೀಕರಣ, ಡಾಂಬರೀಕರಣ ಪ್ಲಾಸ್ಟರಿಂಗ್ ಮತ್ತು ವಿದ್ಯುತ್ ವೈರಿಂಗ್ ಕೆಲಸಗಳನ್ನು ಮಾಡಿಸುವ ಸಲುವಾಗಿ ರೂ. 10.00 ಲಕ್ಷ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಈ ಅನುದಾನವನ್ನು ರಾಜಸ್ವ ಲೆಕ್ಕಶೀರ್ಷಿಕೆ "2202–00–105–0–01–071 ಅಡಿಯಲ್ಲಿ ಭರಿಸತಕ್ಕದ್ದು. ಈ ಸಂಬಂಧ ಖರೀದಿ ಮಾಡುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 1872 ವೆಚ್ಚ–8/2009 ದಿನಾಂಕ 22–12–2009 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.52

**(ಐ.ಎಫ್. ಮಾಗಿ)**

ವಿಶೇಷಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ :** 2009–10ನೇ ಶೈಕ್ಷಣಿಕ ಸಾಲಿನಿಂದ ಎಸ್.ಜೆ.ಆರ್. ಬಿ.ಇಡಿ. ಕಾಲೇಜು, ನೂಲ್ವಿ, ಧಾರವಾಡ, ಈ ಸಂಸ್ಥೆಯ ಬಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ ಬಗ್ಗೆ.

**ಉಲ್ಲೇಖ :** 1. ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ : ಇಡಿ 252 ಯಕೆವಿ 2009, ದಿನಾಂಕ : 27–10–2009

**2.** ಎನ್.ಸಿ.ಟಿ.ಇ. ಪತ್ರ ಸಂಖ್ಯೆ :F.SRC/NCTE/2009/B.Ed./RO/14748, ದಿನಾಂಕ : 27–07–2009.

**3.** ಕರ್ನಾಟಕ ವಿಶ್ವವಿದ್ಯಾನಿಲಯದ ಕುಲಸಚಿವರ ಪತ್ರ ಸಂಖ್ಯೆ : ಕೆಯು/ಸಿಡಿಸಿ/ಸಂಯೋಜನೆ/2009–10/3017, ದಿನಾಂಕ : 17–9–2009.

**ಪ್ರಸ್ತಾವನೆ :**

ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ./ಬಿ.ಇಪಿ.ಇಡಿ. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993 ರ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು. ಅಧಿನಿಯಮ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999 ರ 2 (1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2. ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ಶ್ರೀ ಜಗದ್ಗುರು ರೇಣುಕಾಚಾರ್ಯ ಗ್ರೂಪ್ ಎಜುಕೇಶನ್ ಸೊಸಾಯಿಟಿ, ನೂಲ್ವಿ, ಧಾರವಾಡ ಜಿಲ್ಲೆ ಈ ಸಂಸ್ಥೆಯ ಎಸ್.ಜೆ.ಆರ್. ಬಿ.ಇಡಿ. ಕಾಲೇಜನ್ನು ನೂಲ್ವಿ, ಧಾರವಾಡ, ಇಲ್ಲಿ ಬಿ.ಇಡಿ. ಕೋರ್ಸಿನೊಂದಿಗೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ಆದೇಶದಲ್ಲಿ ಎನ್.ಸಿ.ಟಿ.ಇ. ಸದರಿ ಕಾಲೇಜಿನ ಬಿ.ಇಡಿ. ಕೋರ್ಸಿಗೆ 2009–10ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿರುವುದರ ಮೇರೆಗೆ ಹಾಗೂ ಉಲ್ಲೇಖ (3) ರಲ್ಲಿರುವ ಪತ್ರದಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಈ ಸಂಸ್ಥೆಗೆ 2009–10ನೇ ಸಾಲಿನಿಂದ ಪ್ರಾರಂಭಿಸಲು ಸರ್ಕಾರದ ನಿರ್ದೇಶನಕ್ಕಾಗಿ ಸಲ್ಲಿಸಿದ್ದರ ಮೇರೆಗೆ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 252 ಯುಕೆವಿ 2009, ಬೆಂಗಳೂರು, ದಿನಾಂಕ: 26–12–2009**

ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪಪ್ರಕರಣದಡಿ ಓದಲಾದ ಕರ್ನಾಟಕ ಬಿ.ಇಡಿ./ಬಿ.ಪಿ.ಇಡಿ. ಕೋರ್ಸಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಎಸ್.ಜೆ.ಆರ್. ಬಿ.ಇಡಿ. ಕಾಲೇಜು, ನೂಲ್ವಿ, ಧಾರವಾಡ, ವಿದ್ಯಾಸಂಸ್ಥೆಯ ಬಿ.ಇಡಿ. ಕೋರ್ಸಿಗೆ 2009–10ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.53

**(ಬಿ.ಎಸ್. ಜಾಪಾಲಿ)**

ಸರ್ಕಾರದ ಉಪ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ

(ವಿಶ್ವವಿದ್ಯಾನಿಲಯಗಳು).

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಬೀದರ್ ಜಿಲ್ಲೆ ಭಾಲ್ಕಿ ಪಟ್ಟಣದಲ್ಲಿ ಬೊಮ್ಮಗೊಂಡೇಶ್ವರ ಮೂರ್ತಿ ಸ್ಥಾಪನೆಗೆ ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಇವರ ಪತ್ರ ಸಂ : ಕಸನಿ 5/ಪ್ರತಿಮೆ 2006–07, ದಿನಾಂಕ : 26–8–2009

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 26–8–2009ರ ಪತ್ರದಲ್ಲಿ ಬೀದರ್ ಜಿಲ್ಲೆ ಭಾಲ್ಕಿ ಪಟ್ಟಣದಲ್ಲಿ ಬೊಮ್ಮಗೊಂಡೇಶ್ವರ ಮೂರ್ತಿ ಸ್ಥಾಪನೆಗೆ ಅನುದಾನ ಮಂಜೂರು ಮಾಡುವಂತೆ ವಿಧಾನಸಭಾ ಕ್ಷೇತ್ರದ ಶಾಸಕರಾದ ಶ್ರೀ ಈಶ್ವರ ಖಂಡ್ರೆ ಅವರು ಮಾನ್ಯ ಮುಖ್ಯಮಂತ್ರಿಗಳಿಗೆ ಕೋರಿದ್ದು, ಈ ಯೋಜನೆಯನ್ನು ಅನುಷ್ಠಾನಗೊಳಿಸಲು ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡಲು ಮಾನ್ಯ ಮುಖ್ಯಮಂತ್ರಿಗಳು ಆದೇಶಿಸಿರುವ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆಯ ಐತಿಹಾಸಿಕ ಪುರುಷರಾದ ಮಹಾತ್ಮ ಬೊಮ್ಮಗೊಂಡೇಶ್ವರರು ಸಾಮಾಜಿಕ ಕಾರ್ಯಗಳನ್ನು ಮಾಡುವುದರ ಜೊತೆಗೆ ಬಹಮನಿ ಅರಸರ ಕೃಪಕಟಾಕ್ಷಕ್ಕೆ ಪಾತ್ರರಾಗಿ ರೈತರಿಗೆ ಅನೇಕ ಸಹಾಯಗಳನ್ನು ಮಾಡಿದ್ದಾರೆ ಹಾಗೂ ಅನೀತಿ, ಅಧರ್ಮದ ವಿರುದ್ಧ ಹೋರಾಡಿದ್ದಾರೆಂದು, ಇಂತಹ ಮಹಾ ಪುರುಷರ ಪ್ರತಿಮೆಯನ್ನು ಭಾಲ್ಕಿ ಪಟ್ಟಣದಲ್ಲಿ ಸ್ಥಾಪಿಸುವುದು ಸೂಕ್ತವಾಗಿರುವುದರಿಂದ ಶ್ರೀ ಬೊಮ್ಮಗೊಂಡೇಶ್ವರ ಪ್ರತಿಮೆ ಸ್ಥಾಪನೆಗಾಗಿ ರೂ. 10.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ್ ಇವರಿಗೆ ಬಿಡುಗಡೆ ಮಾಡುವಂತೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಕೋರಿರುತ್ತಾರೆ ಹಾಗೂ ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–800–0–10–059 (ಯೋಜನೆ) ಸ್ವಾತಂತ್ರ್ಯ ಹೋರಾಟಗಾರರ ಅಭಿವೃದ್ಧಿ, ಕ್ರಿ.ಯೋ. ಸಂ. 36 ರಡಿ ಹೆಚ್ಚುವರಿಯಾಗಿ ಒದಗಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 54 ಸ್ಮಾಪ್ರನಿ 2009, ಬೆಂಗಳೂರು, ದಿನಾಂಕ: 30–12–2009.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಭಾಲ್ಕಿ ಪಟ್ಟಣದಲ್ಲಿ ಮಹಾತ್ಮ ಬೊಮ್ಮಗೊಂಡೇಶ್ವರರ ಮೂರ್ತಿ ಸ್ಥಾಪನೆಗೆ ರೂ. 10.00 ಲಕ್ಷ (ರೂಪಾಯಿ ಹತ್ತು ಲಕ್ಷಗಳು ಮಾತ್ರ) ಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಜಿಲ್ಲಾಧಿಕಾರಿಗಳು, ಬೀದರ್ ಜಿಲ್ಲೆ, ಬೀದರ್ ಇವರಿಗೆ ಬಿಡುಗಡೆ ಮಾಡಿದೆ.

1. ಈ ಮೊತ್ತವನ್ನು ಕರ್ನಾಟಕ ವಸ್ತು ಸಂಗ್ರಹಣೆಯಲ್ಲಿ ಪಾರದರ್ಶಕ ಅಧಿನಿಯಮ 1999–2000 ಗಳನ್ನು ಅನುಸರಿಸಿ ಟೆಂಡರ್ ಪ್ರಕ್ರಿಯೆಗಳ ಮೂಲಕ ಖರ್ಚು ಮಾಡತಕ್ಕದ್ದು.
2. ಯಾವ ಉದ್ದೇಶಕ್ಕೆ ಹಣ ಬಿಡುಗಡೆ ಮಾಡಲಾಗಿದೆಯೊ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
3. ನಿಗದಿತ ಸಮಯ/ಅವಧಿಯೊಳಗೆ ಕಾರ್ಯಕ್ರಮ/ಕಾಮಗಾರಿ ಮಾಡತಕ್ಕದ್ದು.
4. ಬಿಡುಗಡೆಗೊಳಿಸಿದ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.

ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–31 (ಕನ್ನಡ ಮತ್ತು ಸಂಸ್ಕೃತಿಗೆ ಉತ್ತಾಹ) – 59 ಇದರಡಿ ಒದಗಿಸಲಾಗಿರುವ ರೂ. 30.00 ಕೋಟಿಗಳಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 9–12–2009 ರ ಟಿಪ್ಪಣಿ ಸಂಖ್ಯೆ ಆ.ಇ. 1185 ವೆಚ್ಚ–7/2009 ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.54

**(ಎಂ.ಕೆ. ಧರ್ಮರಾಜಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ. (ಆಡಳಿತ ಕನ್ನಡ)